Photo by M. V. Vijayakar



ಬಹುಮಾನ
ಪಡೆದ ಶೀರ್ಷಿಕೆ

ಮೇಲೇರಿದರೆ ಸಾಧ್ಯವೆ?

ಕಳುಹಿಸಿದವರು:
ಮಂಜುನಾಥಭಟ್ಟ

# ಚಂದಮಾಮ

## ಈ ಸಂಚಿಕೆಯಲ್ಲಿ



ಇವುಗಳೆಲ್ಲಾ ತುಂಬಿವೆ.




ವೀರ
ಕಿಟ್ಟು
ಮತ್ತು
ಬಾಯಿಬಡುಕ
ಪುಟ್ಟು


ಏನೋ ಪುಟ್ಟು ! ಇವತ್ತು ಪುನಃ
ಬಡಾಯಿ ಕೊಚ್ಚುತ್ತಿದ್ದಿಯಲ್ಲಾ !


ಬಡಾಯಿಕೊಚ್ಚೋದೆ? ಮೀನಿಗೆ
ಕೂಡ ಈಜಾಡೋದಕ್ಕೆ
ಕಲಿಸ್ಯೇನು ಗೊತ್ತೇ?


ನೀರಿಗೆ ಧುಮುಕಿ
ಪಾತಾಳದ ವರೆಗೆ
ಹೋಗ್ತೇನೆ!


ನಿನಗೆ ಬೇಕಾದ್ರೆ..


ಮುತ್ತುಗಳ ಭಂಡಾರವನ್ನೆ
ತಂದುಕೊಡ್ತೇನೆ.

DL. 448A-50 KN


ಅಯ್ಯೋ, ನನ್ನನ್ನು ಕಾಪಾಡಿರಿ, ಕಾಪಾಡಿರಿ.


ಏನು ಆಪತ್ತು! ಬರ್ತೇನೆ ಪುಟ್ಟು!


ಲೋ ಹುಷಾರಾಗಿರು— ನಾನು ನಿನ್ಗಿಂತ ಹೆಚ್ಚು ಭಾರ...


ಅಬ್ಬಾ ! ನೋಡು, ಹೆಚ್ಚು ದಪ್ಪಗಿರೋ ಜನ್ರು ಬೇಗ ಆಯಾಸಗೊಳ್ತಾರೆ.


ಹುಚ್ಚುಚ್ಚಾಗಿ ಮಾತಾಡ್ಬೇಡ ಪುಟ್ಟು! ನೀನು ಬಡಾಯಿ ಕೊಚ್ಚೋ ಹಾಗೆ ನಿನಗೆ ನಿಜವಾಗಿ ಮಾಡ್ಬೇಕೂಂ-ತಿದ್ರೆ, ದಿನಾಲೂ ಹಾಲು ಕುಡಿ ಮತ್ತು 'ಡಾಲ್ಡ' ದಿಂದ ಮಾಡಿದ ಆಹಾರ ತೆಗೆದುಕೋ!

ಮಕ್ಕಳಿಗಾಗಿ—

## ಗಿಬ್ಸ್ ಡೆಂಟಿಫ್ರಿಸ್

### ಬಣ್ಣದ ಚಿತ್ರಕಲೆಯ ಎರಡನೇ ಸ್ಪರ್ಧೆ

ಬಹುಮಾನ ಹೊಂದಿದವರು :

ಮೊದಲನೇ ಬಹುಮಾನ: **ರಾಲೀ ಸೈಕಲ್**

ಮಾಸ್ಟರ್ ಕೆ. ಶ್ರೀನಿವಾಸನ್, ಶ್ರೀರಾಮಪುರಂ, ಬೆಂಗಳೂರು-3.

ಎರಡನೇ ಬಹುಮಾನ: **ಹೆಚ್. ಎಮ್. ವಿ. ಗ್ರಾಮೊಫೋನ್**

ಮಾಸ್ಟರ್ ಕೆ. ಬಿ. ಎಸ್. ಮೋಹನ್, ಶ್ರೀಕಾಕುಳಂ, ಆಂಧ್ರ ಪ್ರದೇಶ್.

ಮೂರನೇ ಬಹುಮಾನ: **ವ್ಯೂಮಾಸ್ಟರ್ ಪ್ರೊಜೆಕ್ಟರ್ ಸೆಟ್ಟು**

ಮಾಸ್ಟರ್ ಗೌತಮ್ ವೊಹ್ರಾ, ಚಾಣಕ್ಯಪುರಿ, ನ್ಯೂಢಿಲ್ಲಿ.

**ಇತರ ಬಹುಮಾನ ಪಡೆದ 100 ಮಂದಿಗೆ ಅಂಚೆಯಮೂಲಕ ತಿಳಿಸಲಾಗಿದೆ.**



# ಚಂದಮಾಮ

ಸಂಚಾಲಕರು: 'ಚಕ್ರಪಾಣಿ'

## ದೀಪಾವಳಿ ಚಿತ್ರಗಳು

ಜ್ಯೋತೀದೇವತೆ ಇಳೆಗಿಳಿತರುವಾ
ವೈಭವ ರಾಶಿಯ ನೋಡುತಲಿ
ಇಳೆಯೆಲ್ಲಾ ಉತ್ಸಾಹವ ತಾಳಿದ
ಹಬ್ಬದ ವೈಭವ ಕಾಣುತಲಿ

ಲಾಗಹಾಕಿ ಬಲು ಆಟವ ತೋರ್ದನು
ತಿಮ್ಮರಾಯ ಲಾಘವದಿಂದ!
ಮೆಚ್ಚಿ ಜನರು 'ದೀಪಾವಳಿ ಮಾಡೆ'ಂ
ದಿತ್ತರು ಹಣವನು ಮುದದಿಂದ

ಕೊಂಡುಕೊಂಡು ಬಗೆಬಗೆ ಬಾಣಗಳನು
ಕರೆದು ತನ್ನೆಲ್ಲ ಗೆಳೆಯರನು
ಹಂಚುತೆ ಆನಂದಘೋಷಣ ಮಧ್ಯದಿ
ಕೃಷ್ಣನಂತೆ ತಾನಾಡಿದನು!

"ಎಲ್ಲರು ಬೆಳಗಲಿ! ನಾವೂ ಬೆಳಗುವ
ಬೆಳಗಲಿ ಅರಣ್ಯ ಸಂಪತ್ತು!
ದೇಶದ ಪ್ರಾಣಿಗಳೆಲ್ಲಾ ಬೆಳಗಲಿ!
ದೀಪಾವಳಿ ಚೆಲು ಕಳೆವೆತ್ತು!"

ಸಂಪುಟ ೨೧]     ನವಂಬರ್ ೧೯೬೮     [ಸಂಚಿಕೆ ೫





# ರಾಜದ್ರೋಹ, ದೇಶದ್ರೋಹ

ಒಂದಾನೊಂದು ಕಾಲದಲ್ಲಿ ಭೂಪಾಲ ದೇಶಕ್ಕೆ ವಿಜಯಾದಿತ್ಯನು ಅರಸನಾಗಿದ್ದನು. ಆತನು ಪಟ್ಟಕ್ಕೇರಿದಕೂಡಲೇ ಪ್ರಜಾಕ್ಷೇಮಾಭ್ಯುದಯ ಕಾರ್ಯಗಳಲ್ಲಿ ಆಸಕ್ತಿ ವಹಿಸಿದನು. ದೇಶದಲ್ಲಿರುವ ಶ್ರೀಮಂತರು, ಸಾಮಂತರು, ಬಲಶಾಲಿಗಳು ನಿರಂಕುಶರಾಗಿ ಪ್ರಜೆಗಳಿಗೆ ಅನೇಕರೀತಿ ತೊಂದರೆ ಕೊಡುತ್ತಿದ್ದರು. ಹೊಲ ಉಳುವ ರೈತ, ಪಶುಪಾಲಕ, ಮತ್ತಿತರರು ಈ ಶ್ರೀಮಂತರಿಂದ ಅನ್ಯಾಯಕ್ಕೆ ಗುರಿಯಾಗಿದ್ದರು. ಇಂಥ ಅನ್ಯಾಗಳನ್ನು ತಡೆಗಟ್ಟಲು ನಿರ್ಧರಿಸಿ, ವಿಜಯಾದಿತ್ಯನು ಹಲವಾರು ಹೊಸ ಶಾಸನಗಳನ್ನು ರೂಢಿಗೆ ತಂದನು. ಅವುಗಳಿಂದ ಸಾಮಾನ್ಯ ಜನಗಳಿಗೆ ಅನೇಕಾನೇಕ ರಕ್ಷಣಾನುಕೂಲಗಳುಂಟಾದುವು. ಬಲಿಷ್ಠರ ಆಟ ಸಾಗದಾಯಿತು.

ರಾಜನು ಮಾಡಿದ ಕಾನೂನುಗಳು ಆತನ ಆಸ್ಥಾನದಲ್ಲೇ ಇದ್ದ ಹಿರಿಯರಲ್ಲಿ ಕೆಲವರಿಗೆ ಸರಿಬೀಳಲಿಲ್ಲ. ಒಬ್ಬ ಸಚಿವನೂ, ಸೇನಾಧಿಪತಿಯೂ ಆ ಗುಂಪಿಗೆ ಸೇರಿದ್ದರು. ಬಹಿರಂಗವಾಗಿ ರಾಜನ ಮಾತಿಗೆ ಪ್ರತಿಹೇಳದಿದ್ದರೂ ಅವರು ರಹಸ್ಯವಾಗಿ ಪಿತೂರಿಹೂಡಿದರು.

ಆ ಗುಂಪಿನಲ್ಲಿ ಸುಮಾರು ಇಪ್ಪತ್ತು ಜನ ಗಣ್ಯರಿದ್ದರು. ಅವರೆಲ್ಲ ಆಸ್ಥಾನದಲ್ಲಿ ಉನ್ನತ ಪದವಿಗಳನ್ನು ಅಲಂಕರಿಸಿದ್ದವರು. ಅವರ ಸಹಕಾರ ಸಹಾಯಗಳಿಲ್ಲದೆ ರಾಜನು ಒಂದೇ ಒಂದುದಿನವಾದರೂ ರಾಜ್ಯವನ್ನು ಪಾಲಿಸುವಂತಿರಲಿಲ್ಲ. ರಾಜನನ್ನು ಉಳಿಸುವುದು, ಅಳಿಸುವುದು ಅವರ ಕೈಯಲ್ಲಿತ್ತು.

ಮಂತ್ರಿ ಮತ್ತು ಸೇನಾಧಿಪತಿ ಪಿತೂರಿಗಾರರ ನಾಯಕರಾದರು. ಮಂತ್ರಿ ರಹಸ್ಯವಾಗಿ ಪ್ರತಿಯೊಬ್ಬ ಪಿತೂರಿಗಾರನನ್ನೂ ಪ್ರತ್ಯೇಕವಾಗಿ ತನ್ನ ಮನೆಗೆ ಕರೆಯಿಸಿಕೊಂಡು "ರಾಜನು ನಮ್ಮ ವರ್ಗದವರಿಗೆ ದ್ರೋಹವೆಸಗಿ ದೇಶಕ್ಕೆ ದ್ರೋಹಮಾಡಿದ್ದಾನೆ. ಸಾಮಾನ್ಯ ಪ್ರಜೆ ಬಯಸುವುದು ಬರಿಯ ನ್ಯಾಯವಲ್ಲ; ನಮ್ಮಂತಹ ಗಣ್ಯರ ಆದರ.

ಕೆ. ರಾಮಚಂದ್ರರಾವ್





ಮಂತ್ರಿಯ ವಾದಕ್ಕೆ ಅವರೆಲ್ಲ ಬೆರಗಾದರು. ಅವರೆಲ್ಲರೂ ಆತನ ಅಭಿಪ್ರಾಯಕ್ಕೆ ತಮ್ಮ ಸಮ್ಮತಿ ಸೂಚಿಸಿದರು. ಎಲ್ಲರೊ ಒಂದು ಕಡೆ ಸಭೆ ಸೇರಿ ಮುಂದಿನ ಕಾರ್ಯಕ್ರಮವನ್ನು ಸಿದ್ಧಪಡಿಸುವ ಸಮಯ ಬಂತು.

"ಇದು ಬಹಳ ಗೋಪ್ಯವಾಗಿ ನಡೆಯಬೇಕಾದ ಸಭೆ. ರಾಜನ ಕಿವಿಗೆ ನಮ್ಮ ಒಳಸಂಚಿನ ವಿಷಯ ತಿಳಿಯುವ ಮೊದಲೇ ಕೆಲಸ ನಡೆದು ಬಿಡಬೇಕು. ಅರಣ್ಯ ಮಧ್ಯೆ ನನ್ನದೊಂದು ಕುಟೀರವಿದೆ. ಬೇಟೆಗೆ ಹೋದಾಗಲೆಲ್ಲ ನಾನು ಅಲ್ಲಿ ಇಳಿದು ಕೊಳ್ಳುವುದುಂಟು. ನಾವೆಲ್ಲರೂ ಅಲ್ಲಿ ಸಭೇಸೇರಿ ಕರ್ತವ್ಯವನ್ನು ನಿರ್ಧರಿಸುವ" ಎಂದ ಒಬ್ಬ ಸಾಮಂತ.

ಅವರಿಗೆ ರಾಜನು ಎಷ್ಟೇ ಅನುಕೂಲಗಳನ್ನು ಒದಗಿಸಿದರೂ ಅವರ ಬಡತನ ತೊಲಗುವುದಿಲ್ಲ. ನಾವು ಸಂತೋಷದಿಂದ ಎಂದಾದರೊಂದು ದಿನ ಅವರಿಗೆ ಒಂದು ನಾಣ್ಯ ಕೊಟ್ಟರೆ ಅವರು ಆನಂದಪಡುತ್ತಾರೆ; ಅದಕ್ಕೆ ಕಾರಣ ವಿಷ್ಟೇ; ನಾವು ಹಾಗೆಕೊಟ್ಟ ಹಣ ಅವರು ದುಡಿಯದೆ ಪಡೆಯುವ ಹಣ. ನಾವು ಮೈಮುರಿದು ಕೆಲಸಮಾಡದೆ ಸಂಪತ್ತಿನಲ್ಲಿ ಓಲಾಡುತ್ತಿರುವುದರಿಂದಲೇ ಅವರು ನಮಗೆ ಗೌರವ ಸೂಚಿಸುತ್ತಾರೆ. ಈಗ ರಾಜನು ಆಪ್ತ ಪ್ರಜೆಗಳಿಗೂ, ಇತ್ತ ನಮಗೂ ನಷ್ಟವಾಗುವಂತೆ ಕಾನೂನುಗಳನ್ನು ಮಾಡಿರುತ್ತಾನೆ. ಇವುಗಳನ್ನು ನಾವು ಸಹಿಸಲು ಸಾಧ್ಯವಿಲ್ಲ" ಎಂದು ಹೇಳುತ್ತಿದ್ದನು.

ಮಾರನೇಯ ದಿನ ಸಂಜೆಯ ವೇಳೆಗೆ ಪಿತೂರಿಗಾರರೆಲ್ಲ ಆ ಕುಟೀರಕ್ಕೆ ಬರಲು ಒಪ್ಪಿಕೊಂಡರು. ಪಿತೂರಿಗಾರರು ಸಭೆ ಸೇರುವ ಸಮಯಕ್ಕೆ ಸರಿಯಾಗಿ ಚಂಡಮಾರುತದೊಂದಿಗೆ ಭಾರಿಮಳೆಯೂ ಸಹ ಬೀಳಲು ಪ್ರಾರಂಭವಾಯಿತು. ಅಂತಲೇ ಆ ಅರಣ್ಯಕ್ಕೆ ಇತರರು ಬರುವ ಭಯವಾಗಲೀ, ಪಿತೂರಿಗಾರರ ಚರ್ಚೆಗೆ ಭಂಗ ವುಂಟಾಗುವ ಹೆದರಿಕೆಯಾಗಲೀ ಇರಲಿಲ್ಲ.

ಎಲ್ಲರೂ ಕುಟೀರದಲ್ಲಿ ನೆರೆದು ಬಾಗಿಲು ಹಾಕಿಕೊಂಡು ಚರ್ಚಿಸಲಾರಂಭಿಸಿದರು.

"ಚರ್ಚಿಸಲು ವಿಷಯಗಳಾದರೂ ಏನಿದೆ? ರಾಜನನ್ನು ಕೊಂದು ನಮ್ಮ ಹಕ್ಕುಗಳನ್ನು ಕಾಪಾಡುವ ವ್ಯಕ್ತಿಯನ್ನು ತಂದು ಗದ್ದುಗೆಗೆ



ಏರಿಸಬೇಕು. ಅದಷ್ಟೇ ನಮ್ಮ ಕರ್ತವ್ಯ" ಎಂದು ಹೇಳಿದ ಸೇನಾಧಿಪತಿ.

ಮಂತ್ರಿ ರಾಜನ ಹತ್ಯೆಗೆ ಒಡಂಬಡಲಿಲ್ಲ. "ರಾಜನನ್ನು ಪದಚ್ಯುತನನ್ನಾಗಿ ಮಾಡಲು ನಾನು ಒಪ್ಪಿಕೊಳ್ಳುತ್ತೇನೆಯೇ ಹೊರತು ಆತನನ್ನು ಕೊಲ್ಲುವುದು ನನಗೆ ಸುತರಾಂ ಇಷ್ಟವಿಲ್ಲ. ವೈಯಕ್ತಿಕವಾಗಿ ಆತನೊಂದಿಗೆ ನಮ್ಮದೇನೂ ಜಗಳವಿಲ್ಲ." ಎಂದ ಮಂತ್ರಿ.

"ಪದವಿಭ್ರಷ್ಟನಾದ ರಾಜನೂ ಅರಸನೇ! ರಾಜನು ಎಷ್ಟೇ ಅಸಮರ್ಥನಾದರೂ ಪ್ರಜೆಗಳಿಗೆ ರಾಜನಲ್ಲಿ ಮೂಢ ಭಕ್ತಿ, ನಂಬಿಕೆಗಳು ಇದ್ದೇ ಇರುವುವು. ರಾಜನು ಜೀವಿಸಿರುವುದು ನಮಗೆ ಎಂದಿದ್ದರೂ ಮುಪ್ಪೇ. ನೆರೆಹೊರೆಯ ರಾಜರು ಆತನಿಗೆ ಸಹಾಯ ನೀಡಬಹುದು. ಶತ್ರುಶೇಷವನ್ನು ಉಳಿಸಲೇಬಾರದು" ಎಂದ ಇನ್ನೊಬ್ಬ ಸಾಮಂತ.

ಕೆಲವು ಪಿತೂರಿಗಾರರು ಸೇನಾಧಿಪತಿಯ ಕಡೆಯೂ, ಕೆಲವರು ಮಂತ್ರಿಯ ಪರವಾಗಿಯೂ ವಾದಿಸಲು ಪ್ರಾರಂಭಿಸಿದರು. ಕಡೆಗೆ ಒಬ್ಬ ಸಾಮಂತನು "ವಾದಪ್ರತಿವಾದಗಳು ಐಕ್ಯತೆಗೆ ಭಂಗತರುತ್ತವೆ. ಮಂತ್ರಿ ಮತ್ತು ಸೇನಾಧಿಪತಿ ಪಗಡೆಯಾಟ ಆಡಲಿ. ಪಂದ್ಯದಲ್ಲಿ ಮಂತ್ರಿಗೆದ್ದರೆ ರಾಜನು ಸಾಯುವುದಿಲ್ಲ; ಸೇನಾಧಿಪತಿ ಜಯಶಾಲಿಯಾದರೆ ರಾಜನು ಸಾಯುವುದು ಖಂಡಿತ." ಎಂದನು.

ಎಲ್ಲರೂ ಆತನ ಸೂಚನೆಯನ್ನು ಅನುಮೋದಿಸಿದರು. ಮಂತ್ರಿಗೆ ಪಗಡೆಯಾಟವೆಂದರೆ



ಪಂಚಪ್ರಾಣ. ಆತನು ಸದಾ ತನ್ನೊಂದಿಗೆ ಪಗಡೆಯಾಟದ ಸಾಮಾನುಗಳನ್ನು ಇಟ್ಟು ಕೊಂಡಿರುತ್ತಿದ್ದನು. ಕೂಡಲೇ ಅವನ್ನು ಹೊರಕ್ಕೆ ತೆಗೆದು ಆಟಕ್ಕೆ ಪ್ರಾರಂಭಿಸುತ್ತಿರಲು ಯಾರೊ ಬಾಗಿಲು ತಟ್ಟಿದ ಸದ್ದಾಯಿತು. "ಬಾಗಿಲು, ಬಾಗಿಲು" ಎಂದು ಕೂಗಿದರು.

ಪಿತೂರಿಗಾರರು ಪೆಚ್ಚಾದರು. ತಮ್ಮ ಒಳಸಂಚಿನ ರಹಸ್ಯ ಬಯಲಾಗಿರಬೇಕು. ಇಲ್ಲದ ಪಕ್ಷಕ್ಕೆ ಇಂಥ ಪ್ರಚಂಡ ಬಿರುಗಾಳಿ ಮತ್ತು ಮಳೆಯಲ್ಲಿ, ಅದೂ ನಡುರಾತ್ರಿಯ ಸಮಯದಲ್ಲಿ ಅರಣ್ಯಕ್ಕೆ ಯಾರು ಬರುತ್ತಾರೆ? "ಮಳೆಗೆ ನೆನೆದು ಒದ್ದೆಯಾಗಿದ್ದೇನೆ. ನನಗೆ ಒಳಗೆ ಸ್ವಲ್ಪ ಸ್ಥಳಕೊಡಿ" ಎಂದು ಹೊರಗಿದ್ದ ವ್ಯಕ್ತಿ ಮತ್ತೆ ಕೇಳಿದನು.



"ಬಾಗಿಲು ತೆರೆಯಿರಿ. ನಾವು ಇಪ್ಪತ್ತು ಜನ ರಿದ್ದೇವೆ. ಒಬ್ಬನು ನಮ್ಮನ್ನೇನು ಮಾಡಬಲ್ಲ" ಎಂದು ಸೇನಾಧಿಪತಿ ಹೇಳಲು, ಒಬ್ಬಾತನು ಹೋಗಿ ಬಾಗಿಲನ್ನು ತೆರೆದನು. ಮರು ಕ್ಷಣವೇ ವಿಜಯಾದಿತ್ಯನು ನೆನೆದು ಒದ್ದೆಯಾದ ಬಟ್ಟೆಗಳೊಂದಿಗೆ ಒಳಗೆ ಪ್ರವೇಶಿಸಿ ಬಾಗಿಲು ಮುಚ್ಚಿದನು. "ಓ, ಹಿರಿಯರೆಲ್ಲಾ ಒಂದು ಕಡೆ ಸೇರಿದ್ದೀರಲ್ಲಾ ಒಳ್ಳೇಯದಾಯಿತು. ಜೂಜು ಆಡುತ್ತಿರುವಂತಿದೆ. ಭಾರಿ ಪಣವಿಟ್ಟು ಆಡುತ್ತಿಲ್ಲವಲ್ಲತಾನೇ" ಎಂದು ಒಂದು ಹಾಸ್ಯ ಚಟಾಕಿ ಹಾರಿಸಿದ ರಾಜ ವಿಜ ಯಾದಿತ್ಯ. ಎಲ್ಲರ ಎದೆ ಡವಡವ ಬಡಿದು ಕೊಂಡಿತು. ಸೇನಾಧಿಪತಿಮಾತ್ರ ಧೈರ್ಯ ವಾಗಿ "ಭಾರಿ ಪಣವೆ ಇಟ್ಟದ್ದೇವೆ, ಮಹಾ ಸ್ವಾಮಿ. ನಿಮ್ಮ ಪ್ರಾಣವನ್ನು ಪಣವಾಗಿಟ್ಟು ನಾನೂ, ಮಂತ್ರಿಯೂ ಆಟವಾಡುವವ ರಿದ್ದೇವೆ" ಎಂದ. ರಾಜನ ವದನದಲ್ಲಿ ಕೋಪ ವಾಗಲಿ, ಭಯವಾಗಲೀ ಕಂಡು ಬರಲಿಲ್ಲ.

"ಆ ಪಣದಿಂದ ಈಗ ಪ್ರಯೋಜನವಿಲ್ಲ. ನಿಮ್ಮೆಲ್ಲರ ಪ್ರಾಣಗಳು ಈಗ ನನ್ನ ಕೈಯಲ್ಲಿವೆ. ಈ ಕುಟೀರದ ಸುತ್ತಲೂ ಆಯುಧಪಾಣಿ ಗಳಾದ ಭಟರಿದ್ದಾರೆ. ರಾಜದ್ರೋಹಕ್ಕೆ ತಲೆ ಹಾಕಿದ ನಿಮ್ಮಲ್ಲಿ ಯಾರೋ ಒಬ್ಬನು ನಂಬಿಕೆ ದ್ರೋಹಿ ಯಿರುವನು. ನಿಮ್ಮ ರಹಸ್ಯ ಆಗಲೇ ಬಯಲಾಗಿದೆ. ಆದರೂ ನೀವು ಪಗಡೆಯಾಡಲು ನನ್ನ ಅಭ್ಯಂತರವೇನೇನೂ ಇಲ್ಲ. ಆದರೆ ನಾನು ಹೇಳಿದ ರೀತಿ ಆಡಬೇಕು. ಇಬ್ಬಿಬ್ಬ ರಂತೆ ಆಡಿ. ಪಂದ್ಯದಲ್ಲಿ ಗೆದ್ದವರು ಸೋತವ ರನ್ನು ಕೊಲ್ಲಬೇಕು. ಹಾಗೆ ಆಡಿ ಇಪ್ಪತ್ತು ಜನರಲ್ಲಿ ಹತ್ತು ಜನರ ಪ್ರಾಣ ಉಳಿಸಿ ಕೊಳ್ಳುವಿರಾ, ಇಲ್ಲ ಎಲ್ಲರೂ ಪ್ರಾಣ ಕಳೆದು ಕೊಳ್ಳುವಿರಾ? ನಿಮ್ಮಿಷ್ಟ" ಎಂದು ರಾಜನು ಗಂಭೀರವಾಗಿ ನುಡಿದನು.

"ನೀವು ಹೇಳಿದಂತೆ ಮಾಡುತ್ತೇವೆ" ಎಂದರು ಪಿತೂರಿಗಾರರು. ತಮ್ಮ ರಹಸ್ಯ ಬಯಲಾಯಿತೆಂದು ತಿಳಿದಕೂಡಲೇ ಎಲ್ಲರಿಗೂ ಜೀವದಬೆಲೆ ತಿಳಿದುಬಂತು. ಬದುಕಿ ಹೊರ ಬೀಳುವ ಆಶೆ ಎಲ್ಲರಲ್ಲೂ ತಲೆದೋರಿತು.

ಮೊಟ್ಟಮೊದಲು ಮಂತ್ರಿ ಸೇನಾಧಿಪತಿ ಪಂದ್ಯವಾಡಿದರು. ಪಂದ್ಯದಲ್ಲಿ ಸೇನಾಧಿಪತಿ ಸೋತುಹೋದನು.



"ನಾನು ಸಾಯುಲು ಒಪ್ಪಲಾರೆ" ಎಂದು ಸೇನಾಧಿಪತಿ ಒರೆಯಿಂದ ಖಡ್ಗವನ್ನು ಹೊರಕ್ಕೆ ತೆಗೆದನು. ಆದರೆ ಉಳಿದವರೆಲ್ಲರೂ ಆತನನ್ನು ಹಿಡಿದು ನಿರಾಯುಧನನ್ನಾಗಿ ಮಾಡಿ, ಹೆಡ ಮುರಿಕಟ್ಟಿ ಗೋಡೆಗೆ ನಿಲ್ಲಿಸಿದರು.

ಕೊಂಚಹೊತ್ತಿಗೆಲ್ಲಾ ಎಲ್ಲರ ಪಗಡೆಯ ಆಟ ಮುಗಿಯಿತು. ಸೇನಾಧಿಪತಿ ಭಯದಿಂದ ಪರಪರ ನಡುಗುತ್ತಿದ್ದನು. ಮಂತ್ರಿ ರಾಜನೊಂದಿಗೆ "ಮಹಾಪ್ರಭು, ತಮ್ಮಲ್ಲಿ ನನ್ನದೊಂದು ಬಿನ್ನಪ. ಈ ಸೇನಾಧಿಪತಿಯು ಬದಲಾಗಿ ನನಗೆ ಶಿಕ್ಷೆ ವಿಧಿಸಿ. ಈತನಿಗೆ ಸಾವೆಂದರೆ ತುಂಬಾ ಹೆದರಿಕೆಯಂತಿದೆ" ಎಂದನು.



ರಾಜನು ಮಂತ್ರಿಯಕಡೆ ಒಮ್ಮೆ ನೋಡಿ "ನೀವೆಲ್ಲರೂ ನನಗೆ ದ್ರೋಹಬಗೆದರೂ ನಿಮ್ಮಲ್ಲಿ ಇನ್ನೂ ಕೊಂಚ ಔದಾರ್ಯ ಉಳಿದಿರುವಂತಿದೆ. ಸರಿ, ನೀವು ಇಂತಹ ದ್ರೋಹಕ್ಕೆ ತಲೆ ಹಾಕಿದಿರೇಕೆ?" ಎಂದು ಕೇಳಿದನು.

"ದೇಶ ಕ್ಷೇಮವನ್ನು ಕೋರಿ ಹಾಗೆ ಮಾಡಬೇಕಾಯಿತು, ಮಹಾಪ್ರಭು, ನೀವು ನಮ್ಮ ವರ್ಗಕ್ಕೆ ಅನ್ಯಾಯವೆಸಗಿ ದೇಶಕ್ಕೇ ಅನ್ಯಾಯ ಮಾಡಿರುವಿರಿ." ಎಂದ ಮಂತ್ರಿ.

"ನೀವೆಲ್ಲ ಶತಮೂರ್ಖರು. ರಾಜನ ಕ್ಷೇಮವೇ ದೇಶಕ್ಷೇಮ. ರಾಜದ್ರೋಹಕ್ಕೆ ಪ್ರಯತ್ನಿಸಿ ನೀವು ದೇಶದ್ರೋಹಮಾಡಿರುವಿರಿ. ನಾನು ಹಿಂದೆಯೇ ಹೇಳಿದಂತೆ ನಿಮ್ಮಲ್ಲಿಯೇ ಯಾರೋ ಅನುಚರದ್ರೋಹಿ ಇದ್ದಾನೆ. ನೀವು ಮಾಡಬೇಕೆಂದಿದ್ದ ಪಿತೂರಿಯ ವಿಷಯ ಜನಗಳಿಗೆ ತಿಳಿದು ಹೋಗಿದೆ. ಕೆಲವು ಧೂರ್ತರು ನನ್ನ ಪತನವನ್ನು ಗ್ರಹಿಸಿ, ನನ್ನಮೇಲೆ ಪ್ರಜೆಗಳನ್ನು ಎತ್ತಿ ಕಟ್ಟಿದರು. ನನ್ನ ಸ್ಥಾನವನ್ನೂ, ನಿಮ್ಮ ಸ್ಥಾನಗಳನ್ನೂ ಆ ದುರುಳರು ಆಕ್ರಮಿಸಿಕೊಂಡಿದ್ದಾರೆ. ಅವರಿಂದ ಕೆರಳಿಸಲ್ಪಟ್ಟ ಜನರು ನಗರಕ್ಕೆ ಬೆಂಕಿಹಚ್ಚಿದರು. ಅವರಲ್ಲೇ ಎರಡು ಪಕ್ಷಗಳಾಗಿ ಒಬ್ಬರಿಗೊಬ್ಬರು ನಗರದ ಬೀದಿಬೀದಿಗಳಲ್ಲಿ ಹೊಡೆದಾಡುತ್ತಿದ್ದಾರೆ. ಆ ಭೀಕರ ಪ್ರದೇಶದಿಂದ ನಾನು ತಲೆ ಮರೆಸಿಕೊಂಡು ಇಲ್ಲಿಗೆ ಬಂದೆ. ನನ್ನೊಂದಿಗೆ ಭಟರು ಯಾರೂ ಇಲ್ಲ. ನನಗೆ ನೀವು ಇಲ್ಲಿ ಸಭೆ ಸೇರಿರುವ ವಿಷಯವೂ ತಿಳಿಯದು. ಅಕಸ್ಮತ್ತಾಗಿ ಇಲ್ಲಿಗೆ ಬಂದೆ. ನನ್ನನ್ನು ನೀವು ಕೊಂದರೂ, ಪ್ರಾಣದೊಂದಿಗೆ ಉಳಿಸಿದರೂ



ಒಂದೇ. ನೀವುಮಾತ್ರ ನಗರಕ್ಕೆ ಹೋಗಿ ಪ್ರಜೆಗಳನ್ನು ನಿಮ್ಮ ಕಡೆ ಒಲಿಸಿಕೊಳ್ಳಲಾರಿರಿ. ಇನ್ನು ನಾನು ಹೋಗುತ್ತೇನೆ" ಎಂದು ರಾಜನು ಹೋಗಲು ಸಿದ್ಧನಾದನು.

"ಮಹಾಪ್ರಭು, ನಿಲ್ಲಿ. ನಾವು ನಗರಕ್ಕೆ ಹಿಂತಿರುಗಿ ಮತ್ತೆ ಶಾಂತಿಸ್ಥಾಪನೆ ಮಾಡೋಣ." ಎಂದ ಮಂತ್ರಿ.

"ನಾನು ಬರಲಾರೆ. ಇಂದಿಗೆ ನನ್ನ ಮೇಲಿದ್ದ ಹೊಣೆಗಾರಿಕೆ ಮುಗಿಯಿತು. ನೀವುಗಳೇ ಹೋಗಿ ಶಾಂತಿಸ್ಥಾಪನೆ ಮಾಡಿ. ಅದು ಸಾಧ್ಯವಾಗದಿದ್ದರೆ ಜನರ ಆಗ್ರಹಕ್ಕೆ ಆಹುತಿಯಾಗಿ" ಎಂದ ರಾಜ ಕಟುವಾಗಿ.

ಪಿತೂರಿಗಾರರೆಲ್ಲ ರಾಜನ ಪಾದಗಳಿಗೆರಗಿ ಹೋಗಬಾರದೆಂದು ಬೇಡಿಕೊಂಡರು. "ಮಹಾಪ್ರಭು, ನೀವೂ ನಾವೂ ಒಟ್ಟಿಗೆ ಹೋದ ಹೊರತು ಪ್ರಜೆಗಳಲ್ಲಿ ಶಾಂತಿ ನೆಲಸಲಾರದು. ದೇಶಕ್ಷೇಮಕ್ಕೋಸ್ಕರ ತಾವು ನಮ್ಮೊಂದಿಗೆ ನಗರಕ್ಕೆ ಬನ್ನಿ." ಎಂದು ಮಂತ್ರಿ ಪ್ರಾರ್ಥಿಸಿದನು.

ರಾಜನು ಅವರ ಬೇಡಿಕೆಯನ್ನು ಮನ್ನಿಸಬೇಕಾಗಿ ಬಂತು. ಆತನು ಮಂತ್ರಿ, ಸೇನಾಧಿಪತಿ ಮತ್ತು ಇತರ ಸಾಮಂತರೊಂದಿಗೆ ನಗರದ ಕಡೆ ಹೊರಟನು. ದಾರಿಯಲ್ಲಿ ಯಾರೂ ಅವರಿಗೆ ಅಡ್ಡಿಬರಲಿಲ್ಲ.

ರಾಜನು ಹೀಗೆ ನಗರವನ್ನು ಪ್ರವೇಶಿಸಿದುದನ್ನು ಕಂಡು ಪ್ರಜೆಗಳ ಉನ್ಮಾದ ಒಮ್ಮೆಗೇ ಇಳಿಯಿತು. ರಾಜನಮೇಲೆ ಪಿತೂರಿ ಹೂಡಿದ ವಿಷಯ ತೀರಾ ಸುಳ್ಳೆಂದು ಅವರು ಭಾವಿಸಿದರು. ತಮ್ಮನ್ನು ರೊಚ್ಚಿಗೆಬ್ಬಿಸಿದ ನಾಯಕರಮೇಲೆ ಪ್ರಜೆಗಳು ಸೇಡು ತೀರಿಸಿಕೊಂಡರು. ಮತ್ತೆ ಭೂಪಾಲ ನಗರದಲ್ಲಿ ಶಾಂತಿ ನೆಲಸಿತು.

ಅಂದಿನಿಂದ ಯಾರೂ ಮಹಾರಾಜನಮೇಲೆ ಪಿತೂರಿ ಹೂಡಲು ತಲೆಹಾಕಲಿಲ್ಲ. ಆತನು ಪಿತೂರಿಗಾರರನ್ನು ಶಿಕ್ಷಿಸಲೂ ಇಲ್ಲ. ಆತನು ಮಾಡಿದ್ದ ಕಾನೂನುಗಳು ಜಾರಿಗೆ ಬರಲು ಬಡಪ್ರಜೆಗಳಿಗೆ ಶ್ರೀಮಂತ, ಸಾಮಂತರ ಭೀತಿ ತೊಲಗಿತು. ಅವರು ಅಂದಿನಿಂದ ಹಾಯಾಗಿ ಜೀವನ ಸಾಗಿಸುತ್ತಿದ್ದರು.






## 4

[ ಸುಬಾಹು ಭಿಕ್ಷುಕನಂತೆ ನಟಿಸಿ ಸರ್ಪಕೇತನ ಸೈನಿಕರ ಬಲೆಗೆ ಬೀಳದೆ ತಪ್ಪಿಸಿಕೊಂಡನು. ತರುವಾಯ ಅವನು ವೀರಪುರವನ್ನು ದೋಚಿಕೊಳ್ಳಲು ಹೊರಟ ಗುಂಪಿನೊಂದಿಗೆ ವೀರಪುರವನ್ನು ಸೇರಿಕೊಂಡನು. ಸರ್ಪಕೇತನ ಸೈನಿಕರು ಮಾಯೋಪಾಯದಿಂದ ವೀರಪುರದ ದಿಡ್ಡೀ ಬಾಗಿಲನ್ನು ತೆರೆಯಿಸಿ ಪಟ್ಟಣವನ್ನು ಪ್ರವೇಶಿಸಿದರು. ಪ್ರಮಾದವನ್ನು ಕುರಿತು, ತನ್ನ ಯಜಮಾನ ಚಂದ್ರವರ್ಮನೊಂದಿಗೆ ಹೇಳಲು, ಸುಬಾಹು ಅರಮನೆಯಕಡೆ ಓಡಿದನು. ಸರ್ಪಕೇತನ ಅನುಚರರೂ ಅವನಹಿಂದೆ ಓಡಿದರು. ತರುವಾಯ—]

**ಸು**ಬಾಹು ತಾನು ತಾತ್ಕಾಲಿಕವಾಗಿ ಪ್ರಮಾದದಿಂದ ಪಾರಾದರೂ ತನ್ನನ್ನು ಬೆನ್ನಟ್ಟಿಕೊಂಡು ಕೆಲವಾರು ಸೈನಿಕರು ಬರುತ್ತಿರುವರೆಂದು ಅವರ ಕಾಲಿನ ಸಪ್ಪಳದಿಂದ ತಿಳಿದುಕೊಂಡನು. ಆದರೆ ಅವನಿಗೆ ಹಿಂದಕ್ಕೆ ತಿರುಗಿ ನೋಡಲೂ ಸಹ ಅವಕಾಶವಿರಲಿಲ್ಲ. ಅರಮನೆಯನ್ನು ಸೇರಿಕೊಳ್ಳುವುದರಲ್ಲೇ ಅವನ ಮನಸ್ಸು ಮಗ್ನವಾಗಿತ್ತು. ದಾಪುಗಾಲು ಹಾಕುತ್ತ ಹಾರಿ ಹಾರಿ ಓಡಿದನು. ಹಿಂದಿನಿಂದ ಗದ್ದಲ, ಚಪ್ಪಾಳೆಯ ಶಬ್ದ ಮತ್ತಿಷ್ಟು ಸಮೀಪಿಸಿತು. ಅಷ್ಟರಲ್ಲಿ ಸುಬಾಹು ಅರಮನೆಯ ಮುಂದಿದ್ದ ಜಲಯಂತ್ರದ ಮಗ್ಗುಲಲ್ಲಿ ಓಡಿ, ಭವನದಮುಂದೆ ನಿಂತಿದ್ದ ಕಾವಲುಗಾರರನ್ನು ಕುರಿತು "ನಾನು ಸುಬಾಹು. ದಾರಿಬಿಡಿ. ನನ್ನನ್ನು ಸರ್ಪಕೇತನ ಸೈನಿಕರು ಅಟ್ಟಿಸಿಕೊಂಡು ಬರುತ್ತಿದ್ದಾರೆ. ಅವರನ್ನು



ಸುಬಾಹುವಿನ ಅರಚಾಟವನ್ನು ಕೇಳಿ ನಿದ್ರಿಸುತ್ತಿದ್ದ ಚಂದ್ರವರ್ಮನು ಬೆಚ್ಚಿಬಿದ್ದು ಎಚ್ಚರಗೊಂಡನು. ತರಾತುರಿಯಿಂದ ಶಯನಾಗಾರವನ್ನು ಬಿಟ್ಟು ಯುವರಾಜನು ಹೊರಕ್ಕೆ ಬಂದನು. ಅವನಿಗೆ ಅರಮನೆಯ ಮುಂದಾಗುತ್ತಿದ್ದ ಭಯಂಕರವಾದ ಗಲಭೆ ಕೇಳಿಸಿತು. ಆಶ್ಚರ್ಯದಿಂದ ಅವನು ಕೋಲಾಹಲ ಬಂದ ಕಡೆ ನೋಡುತ್ತಿರಲು ಸುಬಾಹು ಏದುತ್ತ ಅಲ್ಲಿಗೆ ಬಂದನು.

"ಯುವರಾಜ, ಸರ್ಪಕೇತನ ಸೈನಿಕರು ಮೋಸದಿಂದ ದಿಡ್ಡಿಬಾಗಿಲನ್ನು ತೆರೆಯಿಸಿಕೊಂಡು ನಗರವನ್ನು ಪ್ರವೇಶಿಸಿದ್ದಾರೆ. ನಮ್ಮ ಭಟರಿಗೆ ಎಚ್ಚರಿಕೆಕೊಡಿ. ಶತ್ರುಗಳು ಇಷ್ಟು ಹೊತ್ತಿಗಾಗಲೇ ಅರಮನೆಯ ಪ್ರಾಂಗಣವನ್ನು ಪ್ರವೇಶಿಸಿರಬಹುದು" ಎಂದನು.

ಚಂದ್ರವರ್ಮನು ಕ್ಷಣಕಾಲ ಸ್ತಬ್ಧನಾದನು. ಅಷ್ಟರಲ್ಲಿ ರಾಜಮಾರ್ಗದ ಇಕ್ಕಡೆಗಳಲ್ಲಿದ್ದ ಮನೆಗಳಿಂದ ಭಾರಿ ಜ್ವಾಲೆಗಳೆದ್ದಿರುವುದನ್ನು ಕಂಡನು. ನಗರದಕಡೆಗಳಿಂದ ಪ್ರಳಯಧ್ವನಿ ಹೊರಡುತ್ತಿದ್ದಿತು. ಕುದುರೆಗಳ ಕೆನೆಯಾಟ, ಸೈನಿಕರ ಕೂಗಾಟ, ಗೃಹಸ್ಥರ ಆರ್ತನಾದಗಳು ಒಟ್ಟುಸೇರಿ ವಿಚಿತ್ರಧ್ವನಿಯಾಗಿ ಒಮ್ಮೆಗೇ ಗಗನಕ್ಕೇರಿತು.

ಚಂದ್ರವರ್ಮನು ಸುಬಾಹುಕಡೆ ತಿರುಗಿ "ನಮ್ಮ ತಂದೆಯವರೆಲ್ಲಿ? ಅವರೊಂದಿಗೆ ನೀನೂ ಯಶೋವರ್ಧನ ಮಹಾರಾಜರಬಳಿಗೆ ಹೋಗಿದ್ದೆಯಲ್ಲಾ?" ಎಂದು ಕೇಳಿದನು.

ಎದುರಿಸುವಂತೆ ಭಟರಿಗೆಲ್ಲರಿಗೂ ಎಚ್ಚರಿಕೆ ಕೊಡಿ," ಎಂದು ಆಜ್ಞಾಪಿಸಿದನು. ಕೂಡಲೇ ದ್ವಾರಪಾಲಕರು ಹಿಂದೆಸರಿದು ಅವನಿಗೆ ದಾರಿಮಾಡಿಕೊಟ್ಟರು.

ಸುಬಾಹು ಚಂಗನೆ ಅರಮನೆಯನ್ನು ಪ್ರವೇಶಿಸಿದನು. ಇಷ್ಟರಲ್ಲಿ ಭಟರು ತಮ್ಮ ಖಡ್ಗಗಳನ್ನು ಝಳಪಿಸುತ್ತಾ ಆವೇಶದಿಂದ ಸರ್ಪಕೇತನ ಸೈನಿಕರಮೇಲೆ ಬಿದ್ದರು.

ಸುಬಾಹು ಚಂದ್ರವರ್ಮನಿದ್ದ ಉಪ್ಪರಿಗೆಯಕಡೆ ಹೋಗುತ್ತ "ಯುವರಾಜ, ಕೋಟೆಯೊಳಗೆ ಘೋರ ಪ್ರಮಾದ ಒದಗಿದೆ. ಸರ್ಪಕೇತನ ಸೈನಿಕರು ಪಟ್ಟಣವನ್ನು ಪ್ರವೇಶಿಸಿ ಲೂಟಿಮಾಡುತ್ತಿದ್ದಾರೆ" ಎಂದು ಗಟ್ಟಿಯಾಗಿ ಕೂಗಿಕೊಂಡನು.





ಅವನ ಪ್ರಶ್ನೆ ಕೇಳಿ ಸುಬಾಹುವಿನ ಮುಖ ಬಿಳಿಚಿಕೊಂಡಿತು. ಎಷ್ಟು ಪ್ರಯತ್ನ ಮಾಡಿದರೂ ಅವನ ಬಾಯಿಂದ ಮಾತು ಹೊರಡಲಿಲ್ಲ. ಆಗಿನ ಪರಿಸ್ಥಿತಿಯಲ್ಲಿ ಸೂರ್ಯವರ್ಮನ ದುರ್ಮಾರ್ಗತನದ ಸುದ್ದಿ ತಿಳಿಸುವುದು ಉತ್ತಮವಲ್ಲವೆಂದು ಭಾವಿಸಿದನು. ಆ ಘಾತುಕಸುದ್ದಿಯ ವೇದನೆಯನ್ನು ಚಂದ್ರವರ್ಮನು ತಾಳಿಕೊಳ್ಳಬಲ್ಲನೆ? ಮೊದಲು ಪಟ್ಟಣವನ್ನು ಪ್ರವೇಶಿಸಿದ ಸರ್ಪಕೇತನಕಡೆಯವರನ್ನು ನಾಶಮಾಡಬೇಕು. ಅನಂತರ ಉಳಿದ ವಿಷಯುಗಳನ್ನು ನಿಧಾನವಾಗಿ ಮಾತನಾಡಬಹುದೆಂಧು ಯೋಚಿಸಿಕೊಂಡನು.

"ಯುವರಾಜ, ನಿಮ್ಮ ಪಿತರು ವೀರಪುರದ ಮಾರ್ಗದಲ್ಲಿ ಬರುತ್ತಿದ್ದಾರೆ. ಸದ್ಯಕ್ಕೆ ಈಗಿನ ಕರ್ತವ್ಯವನ್ನು ಕುರಿತು ಯೋಚಿಸಿ. ಸರ್ಪಕೇತನ ಸೈನಿಕರು ನಗರಕ್ಕೆ ಬೆಂಕಿಹಚ್ಚುತ್ತಿದ್ದಾರೆ. ಯಾವ ನಿಮಿಷವೋ, ಯಾವ ಗಳಿಗೆಯೋ ಅವರು ಅರಮನೆಯನ್ನು ಪ್ರವೇಶಿಸಬಹುದು. ಇದಕ್ಕೆ ತಕ್ಕ ಪರಿಹಾರವನ್ನು ಕೂಡಲೇ ಮಾಡಬೇಕು" ಎಂದು ಸುಬಾಹು ಉಕ್ಕಿಬರುತ್ತಿದ್ದ ದುಃಖವನ್ನು ತಡೆಹಿಡಿದು ಕೊಂಡು ಹೇಳಿದನು.

ಅಷ್ಟರಲ್ಲಿ ಉಪ್ಪರಿಗೆಯ ಮೇಲಕ್ಕೆ ಬರುವ ಪಾವಟಿಗಳಬಳಿ ಶಬ್ದವಾಯಿತು. ಶತ್ರುಸೈನಿಕರಿರಬಹುದೆಂದು ಸುಬಾಹು ಅನುಮಾನಗೊಂಡು ಬೆದರಿದನು. ಅವನು ತಕ್ಷಣ ಚಂದ್ರವರ್ಮನ ಶಯನಾಗಾರವನ್ನು ಪ್ರವೇಶಿಸಿ, ಗೋಡೆಗೆ ನೇತು ಹಾಕಿದ್ದ ಎರಡು ಖಡ್ಗಗಳನ್ನು ತೆಗೆದುಕೊಂಡು ಹೊರಗೆಬಂದನು. ಖಡ್ಗಗಳಲ್ಲಿ ಒಂದನ್ನು ಚಂದ್ರವರ್ಮನಿಗೆ ಕೊಟ್ಟನು. ಅಷ್ಟರಲ್ಲಿ ಮೆಟ್ಟಲುಗಳ ಮೇಲಿಂದ "ಯುವರಾಜ, ಯುವರಾಜ" ಎಂದು ಯಾರೋ ಕೂಗಿಕೊಂಡರು. ಆ ಕಂಠಸ್ವರವನ್ನು ಗುರುತಿಸಿ ಚಂದ್ರವರ್ಮನು "ಯಾರು? ಸೇನಾಧಿಪತಿ ದೀರಮಲ್ಲರೇ?" ಎಂದು ಮುಂದೆಬಂದನು.

ವೀರಪುರದ ಮಹಾಸೇನಾಧಿಪತಿಯಾದ ಧೀರಮಲ್ಲನು ನೆಟ್ಟಗೆ ಚಂದ್ರವರ್ಮನಿದ್ದ ಸ್ಥಳಕ್ಕೆ ಓಡಿಬಂದನು.

"ಯುವರಾಜ, ಕುತ್ತು ಕುತ್ತಿಗೆತನಕ ಬಂದಿದೆ. ಯಶೋವರ್ಧನ ಮಹಾರಾಜರು ನಮ್ಮಮೇಲೇ ಕೋಪ ಆಗ್ರಹಗೊಂಡಿದ್ದಾರೆ.



ಅವರ ಸೈನಿಕರು ಪಟ್ಟಣವನ್ನು ಪ್ರವೇಶಿಸಿ ಮನೆಗಳಿಗೆ ಬೆಂಕಿಹಚ್ಚುತ್ತಿರುವರು. ಕೆಲವಾರು ಪುಂಡ ನಗರವಾಸಿಗಳೂ ಸೇರಿಕೊಂಡು ಅವರಿಗೆ ಬೆಂಬಲಕೊಡುತ್ತಿದ್ದಾರೆ" ಎಂದನು ಧೀರಮಲ್ಲ.

ಯಶೋವರ್ಮನ ಸೈನಿಕರು ಬಂದರೆಂದ ಕೂಡಲೇ ಚಂದ್ರವರ್ಮನು ಗಡಗಡ ನಡುಗಿದನು. "ಸೇನಾನಿ...." ಎಂದು ಏನೋ ಹೇಳುವಷ್ಟರಲ್ಲಿ ಸುಬಾಹು ನಡುವೆ ಬಾಯಿಹಾಕಿ "ಯುವರಾಜರೇ, ಆ ಸೈನಿಕರನ್ನು ಯಶೋವರ್ಮ ಹಾರಾಜರು ಕಳುಹಿಸಲಿಲ್ಲ. ಮೋಸದಿಂದ ನಮ್ಮ ಪಟ್ಟಣವನ್ನು ಪ್ರವೇಶಿಸಿ, ಪ್ರಜೆಗಳನ್ನು ವಂಚಿಸಲು ಸರ್ಪಕೇತನು ಹೂಡಿದ ಆಟವದು. ಅಷ್ಟೇ. ನಾನು



ಮಾರುವೇಷದಿಂದ ಅವರೊಂದಿಗೆ ಪಟ್ಟಣವನ್ನು ಪ್ರವೇಶಿಸಿದೆ. ಆದುದರಿಂದಲೇ ಅವರ ರಹಸ್ಯ ತಂತ್ರವೆಲ್ಲಾ ನನಗೆ ತಿಳಿಯಿತು. ಸಾಮಾನ್ಯ ನಾಗರೀಕರ ಉಡುಪು ಧರಿಸಿ ಶತ್ರು ಸೈನಿಕರಿಗೆ ನೆರವು ನೀಡುತ್ತಿರುವ ಜನ ನಮ್ಮ ನಗರವಾಸಿಗಳಲ್ಲ. ಅವರು ಸಂಸ್ಥಾನದ ಸರಹದ್ದಿನಲ್ಲಿರುವ ಹಳ್ಳಿಗರು" ಎಂದು ಹೇಳಿದನು.

ಸುಬಾಹು ಹೇಳಿದ ವಿಷಯವನ್ನು ಕೇಳಿ ಸೇನಾಧಿಪತಿ ಧೀರಮಲ್ಲನು ದಿಗ್ಭ್ರಮೆಗೊಂಡನು. ತರುವಾಯ ಅವನು ಚಂದ್ರವರ್ಮನಕಡೆ ತಿರುಗಿ "ಸುಬಾಹು ಹೇಳಿದ ಮಾತೇ ಸರಿಯೆಂದು ತೋರುತ್ತಿದೆ. ಸರ್ಪಕೇತನು ಇಂತಹ ಕುಟಿಲೋಪಾಯಗಳಲ್ಲಿ ಪ್ರಚಂಡ. ಈಗಿನ ಪರಿಸ್ಥಿತಿಯನ್ನು ನೋಡುವಾಗ ಅವನಿಂದ ಮಾಹಿಷ್ಮತಿಗೆ ಹೋಗಿರುವ ಮಹಾರಾಜರಿಗೂ ಅಪಾಯವಾಗಬಹುದು" ಎಂದ ಧೀರಮಲ್ಲ.

"ಮೊದಲು ನಾವು ಸಿಲುಕಿಕೊಂಡಿರುವ ಸಂದಿಗ್ಧದಿಂದ ಪಾರಾಗುವ ಉಪಾಯ ಹುಡುಕಿ ಸೇನಾಧಿಪತಿಗಳೇ. ನಮ್ಮ ಭಟರನ್ನೆಲ್ಲಾ ಸನ್ನದ್ಧಗೊಳಿಸಿ ಶತ್ರುಗಳನ್ನು ಪಟ್ಟಣದಿಂದ ಹೊರದೂಡುವ ವ್ಯವಸ್ಥೆ ಮಾಡಿ" ಎಂದು ಹೇಳಿ ಸುಬಾಹು ಚಂದ್ರವರ್ಮನಕಡೆ ಅರ್ಥಗರ್ಭಿತವಾಗಿ ನೋಡಿದನು.

ಚಂದ್ರವರ್ಮನು ಸುಬಾಹು ಹೇಳಿದ ಮಾತಿಗೆ ಬೆಂಬಲಕೊಟ್ಟು "ಸೇನಾಧಿಪತಿಗಳೇ, ಅರಮನೆಯ ರಕ್ಷಣೆಯ ವಿಷಯವೇನು?







ಅವಕ್ಕಾಗಿ ನೀವು ಏನು ಕ್ರಮ ತೆಗೆದು ಕೊಂಡಿರುವಿರಿ?" ಎಂದು ಕೇಳಿದನು.

"ಯಶೋವರ್ಧನ ಮಹಾರಾಜರಿಗೆ ಜಯ ವಾಗಲಿ ಎಂದು ಘೋಷಣ ಮಾಡುತ್ತಾ ಕೆಲವು ಆಯುಧಪಾಣಿಗಳು ಕಾವಲುಗಾರರ ಕಣ್ಣು ತಪ್ಪಿಸಿ ಅರಮನೆಯ ಪ್ರಾಂಗಣವನ್ನು ಸೇರಿಕೊಂಡರು. ಕೂಡಲೇ ನಮ್ಮ ಭಟರು ಅವರನ್ನು ಎದುರಿಸಿ, ಕೊಂದುಹಾಕಿದರು. ಹಾಗೆ ಒಳಗೆ ನುಗ್ಗಿದ ಜನ ಸರ್ಪಕೇತನ ಕಡೆಯವರೆಂದು ಸುಬಾಹು ಮುನ್ನೆಚ್ಚರಿಕೆ ಕೊಟ್ಟದ್ದು ನಮಗೆ ತುಂಬಾ ಉಪಕಾರ ವಾಯಿತು" ಎಂದ ಧೀರಮಲ್ಲ.

ಹಾಗಾದರೆ ನಮ್ಮ ಭಟರನ್ನೆಲ್ಲಾ ಸಜ್ಜು ಗೊಳಿಸಿರಿ. ಕೆಲವು ಜನ ಭಟರು ಇಲ್ಲಿ ಕಾವ ಲಿರಲಿ. ಉಳಿದವರೊಂದಿಗೆ ನಾವು ನಗರದೊಳ ಭಾಗಕ್ಕೆ ಹೋಗಿ ಸರ್ಪಕೇತನ ಸೈನಿಕರನ್ನು ಸಿಕ್ಕಿದಲ್ಲಿ ಹಿಡಿದು ಚೆಂಡಾಡೋಣ" ಎಂದು ಚಂದ್ರವರ್ಮ ಹೇಳಿದ.

"ಭಟರೆಲ್ಲರೂ ಸಿದ್ಧರಾಗಿದ್ದಾರೆ, ಯುವ ರಾಜ. ಅವರು ಯಶೋವರ್ಧನನ ಹೆಸರಿನಲ್ಲಿ ಮಾಡಿದ ಜಯಕಾರ ಕೇಳಿ ಕೆಂಗೆಟ್ಟು ನಾನು ನಿಮ್ಮಬಳಿಗೆ ಬಂದೆ" ಎಂದ ಧೀರಮಲ್ಲ.

ಆ ವೇಳೆಗೆ ಪಟ್ಟಣದ ಮೂಲೆ ಮೂಲೆ ಗಳಿಂದ ಬೆಂಕಿಯ ಜ್ವಾಲೆಗಳು ಕಾಣಿಸಿದುವು. ರಾಜಬೀದಿಯಿಂದ ಮಾತ್ರವಲ್ಲದೆ ಎಲ್ಲಕಡೆಗ ಳಿಂದಲೂ ಹೆಂಗಸರ ಮತ್ತು ಮಕ್ಕಳ ಗೋಳಾಟ ಕೇಳಿಬರುತಿತ್ತು. ಚಂದ್ರವರ್ಮನು



ಉಪ್ಪರಿಗೆಯಮೇಲಿಂದ ಧಗಧಗ ಉರಿಯು ತ್ತಿದ್ದ ಪಟ್ಟಣದಕಡೆ ನೋಡಿ ನಿಟ್ಟುಸಿರಿಡುತ್ತಾ ಮೆಟ್ಟಲು ಇಳಿದು ಕೆಳಗೆ ಬಂದನು. ಅರ ಮನೆಯಮುಂದೆ ಐನೂರು ಸುಸಜ್ಜಿತರಾದ ಭಟರು ಸಾಲಾಗಿ ನಿಂತಿದ್ದರು. ಅವರ ಪಕ್ಕ ದಲ್ಲಿ ಕೆಲವರು ಅಶ್ವಾರೋಹಿಗಳು ಈಟಿ ಗಳನ್ನು ಹಿಡಿದು ಸಿದ್ಧರಾಗಿದ್ದರು.

ಚಂದ್ರವರ್ಮನು ಐವತ್ತು ಜನ ಭಟ ರನ್ನೂ, ಹತ್ತು ಜನ ಅಶ್ವಿಕರನ್ನೂ ಅರ ಮನೆಯ ರಕ್ಷಣೆಗೆ ನಿಯಮಿಸಿ ಉಳಿದ ಸೈನ್ಯ ವನ್ನು ಎರಡು ಭಾಗ ಮಾಡಿ, ಒಂದು ತಂಡ ವನ್ನು ಸೇನಾಧಿಪತಿ ಧೀರಮಲ್ಲನಿಗೆ ಒಪ್ಪಿಸಿ "ಸೇನಾಧಿಪತಿಗಳೇ, ನಾನು ಅರಮನೆಯನ್ನು ಬಿಟ್ಟು ರಾಜಮಾರ್ಗದಿಂದ ಪೂರ್ವ ದಿಕ್ಕಿನ



ಕಡೆ ಹೋಗುತ್ತೇನೆ. ನೀವು ನಿಮ್ಮ ಭಟ ರೊಂದಿಗೆ ಪಶ್ಚಿಮ ದಿಕ್ಕಿಗೆ ಹೋಗಿರಿ. ಈ ರೀತಿ ನಾವು ಶತ್ರುಸೈನ್ಯವನ್ನು ಭೇದಿಸಿಕೊಂಡು ಹೋಗಿ ಮತ್ತೆ ಉತ್ತರ ದ್ವಾರದಕಡೆ ಸಂಧಿಸೋಣ. ಒಂದುವೇಳೆ, ದೈವಸಂಕಲ್ಪ ಬೇರೆ ರೀತಿಯಿದ್ದರೆ, ಪರಿಸ್ಥಿತಿಗನುಸರವಾಗಿ ಕಾರ್ಯಕ್ರಮವನ್ನು ನಿರ್ಧರಿಸಬಹುದು. ಬೇರೆ ಮಾರ್ಗವೇ ಇಲ್ಲ" ಎಂದನು.

"ಆಗಬಹುದು, ಯುವರಾಜ. ನೀವು ಮಾತ್ರ ಮುಂದಾಲೋಚನೆ ಮಾಡದೆ ಅನವಸರವಾದ ಪ್ರಮಾದಕ್ಕೆ ಗುರಿಯಾಗಬೇಡಿ" ಎಂದು ಧೀರಮಲ್ಲನು ಎಚ್ಚರಿಸಿದನು.

ಕೂಡಲೇ ಎರಡು ತಂಡದವರು "ಸೂರ್ಯವರ್ಮ ಮಹಾರಾಜರಿಗೆ ಜಯವಾಗಲಿ" ಎಂದು ಜಯಜಯಾಕಾರ ಮಾಡಿ, ಸಮರೋತ್ಸಾಹದಿಂದ ಅರಮನೆಯ ಪ್ರಾಂಗಣವನ್ನು ದಾಟಿ ಬೀದಿಗೆಬಂದರು.

ಆಗತಾನೇ ಪೂರ್ವದಿಕ್ಕಿನಲ್ಲಿ ಸೂರ್ಯನು ಉದಯಿಸುತ್ತಿದ್ದನು. ಖಡ್ಗ ಹಿಡಿದು ಕುದುರೆಯನ್ನೇರಿದ್ದ ಸುಬಾಹು ಚಂದ್ರವರ್ಮನಿಗೆ ಉರಿಯುತ್ತಿದ್ದ ಮನೆಗಳಕಡೆ ತೋರಿಸಿ "ಸರ್ಪಕೇತನು ತನ್ನ ಕುಟಿಲಯತ್ನದಲ್ಲಿ ಸಾಕಷ್ಟು ಜಯ ಸಾಧಿಸಿದ್ದಾನೆ! ಅವನ ಪಕ್ಷವಾಗಿ ಪಟ್ಟಣವನ್ನು ಪ್ರವೇಶಿಸಿದವರಲ್ಲಿ ಸುಶಿಕ್ಷಿತರಾದ ಸೈನಿಕರು ಬಹುಕೊಂಚಮಂದಿ. ಉಳಿದವರೆಲ್ಲ ಕೈಗೆ ಸಿಕ್ಕಿದುದನ್ನು ದೋಚಿಕೊಂಡು ಹೋಗಲು ಬಂದ ಹಳ್ಳಿಗರು. ಆದುದರಿಂದ ನಾವು ಈ ಸಮಯದಲ್ಲಿ ಕೊಂಚವೂ ದಯ ದಾಕ್ಷಿಣ್ಯಗಳನ್ನು ತೋರದೆ ಅವರಲ್ಲಿ ಕೆಲವರನ್ನಾದರೂ ಕೊಂದರೆ, ಉಳಿದವರು ಹೆದರಿ ಜೀವದಾಸೆಯಿಂದ ನಗರವನ್ನು ತೊರೆದು ಪರಾರಿ ಯಾಗುತ್ತಾರೆ" ಎಂದನು.

ಚಂದ್ರವರ್ಮನಿಗೂ ಅದೇ ಸರಿ ಎನಿಸಿತು. ಅವನು ತನ್ನ ಸಂಗಡವಿದ್ದ ಸವಾರರನ್ನು ಎಚ್ಚರಿಸಿ ಉಚ್ಚಸ್ವರದಲ್ಲಿ ಜಯಕಾರ ಮಾಡುತ್ತಾ, ಅತ್ತಿತ್ತ ಓಡುತ್ತಿದ್ದ ಧಾಳಿಗಾರರಮೇಲೆ ನುಗ್ಗಿದನು. ಮರುಕ್ಷಣವೇ ಅಶ್ವಾರೋಹಿಗಳ ಮೃತ್ಯುರೂಪೀ ಈಟಿಗಳು ಧಾಳಿಗಾರರ ಬೆನ್ನು ಮತ್ತು ಎದೆಗಳನ್ನು ಸೀಳಿದುವು.

ಆಗ "ಸೂರ್ಯವರ್ಮನ ಸೈನಿಕರು, ಸೂರ್ಯವರ್ಮನ ಸೈನಿಕರು" ಎಂಬ



ಕೂಗಾಟ ಆ ಪ್ರದೇಶದಲೆಲ್ಲಾ ಪ್ರತಿಧ್ವನಿಸಿತು. ಮರುಕ್ಷಣವೇ ರಾಜಮಾರ್ಗದ ಪಕ್ಕದ ಓಣಿಗಳಿಂದ "ಏನು ಸೂರ್ಯವರ್ಮನ ಸೈನಿಕರೇ? ಎಲ್ಲಿ, ಎಲ್ಲಿ?" ಎಂದು ಅಬ್ಬರಿಸುತ್ತ ಬರುತ್ತಿರುವ ಸವಾರರ ಕುದುರೆಯ ಗೊರಸಿನ ಸದ್ದು ಅವರಿಗೆ ಕೇಳಿಸಿತು. ಶತ್ರು ಸೈನಿಕರನ್ನು ಹತಗೊಳಿಸಲು ಇದೇ ಸುಸಮಯವೆಂದು ಚಂದ್ರವರ್ಮನು ಊಹಿಸಿದನು. ಅವನು ತನ್ನ ಭಟರಲ್ಲಿ ಅರ್ಧಭಾಗವನ್ನು ಶತ್ರುಸೈನಿಕರು ಬರುತ್ತಿದ್ದ ಸಂದಿಗೆ ಒಂದು ಪಕ್ಕದಲ್ಲಿ ನಿಲ್ಲಿಸಿ, ಉಳಿದರ್ಧಮಂದಿಯೊಂದಿಗೆ ಮತ್ತೊಂದುಕಡೆ ನಿಂತನು. ರಾಜಬೀದಿಗೆ ಬರುವ ಆತುರದಲ್ಲಿ ಬಂದು ಮುಂದೆನೋಡದೆ ನುಗ್ಗುತ್ತಿದ್ದ ಶತ್ರು ಸೈನಿಕರನ್ನು, ಹಣ್ಣುಗಾಯಿ ನೀರುಗಾಯಿ ಮಾಡಿಬಿಡಬೇಕೆಂದು ಚಂದ್ರವರ್ಮನು ಈ ಬಗೆಯ ವ್ಯೂಹವನ್ನು ಹೂಡಿದನು.

ಅವನ ವ್ಯೂಹ ಫಲಿಸಿತು. ಮಿತಿಮೀರಿದ ಉತ್ಸಾಹದಿಂದ ಸರ್ಪಕೇತನ ಸೈನಿಕರು ರಾಜಮಾರ್ಗದಮೇಲೆ ಏನಿರುವುದೋ ನೋಡದೆ ಸಂದಿನಿಂದ ಹೊರಬೀಳಲು ಪ್ರಯತ್ನಿಸಿದರು. ಇಕ್ಕಡೆಗಳಲ್ಲೂ ಸಿದ್ಧರಾಗಿದ್ದ ಚಂದ್ರವರ್ಮನ ಭಟರು ಬಂದವರನ್ನು ಬಂದಂತೆ ತಮ್ಮ ಈಟಿಗಳಿಗೆ ಬಲಿಕೊಡುತ್ತಿದ್ದರು. ಅಲ್ಲಿ ನಡೆಯುತ್ತಿದ್ದ ಭೀಕರ ದೃಶ್ಯವನ್ನು ಕಂಡು, ಹಿಂತಿರುಗಿ ಹೋಗಲು ಯತ್ನಿಸಿದ, ಶತ್ರುಸೈನದ ಬಹುಭಾಗದ ಸೈನಿಕರು ಚಂದ್ರವರ್ಮನ ಭಟರಿಂದ ಹತರಾಗಿ ಬಿದ್ದರು.



ಈ ವಿಜಯದಿಂದ ಚಂದ್ರವರ್ಮನ ಭಟರಿಗೆ ಆತ್ಮವಿಶ್ವಾಸ ಲಭಿಸಿತು. ಉತ್ಸಾಹವುಂಟಾಯಿತು. ಅವರು "ಸೂರ್ಯವರ್ಮ ಮಹಾರಾಜರಿಗೆ ಜಯವಾಗಲಿ" ಎಂದು ಉದ್ಗಾರಮಾಡಿ, ರಸ್ತೆಯಲ್ಲಿ ಕಾಣಿಸಿದ ಪ್ರತಿ ಶತ್ರುಸೈನಿಕನನ್ನು, ದರೋಡೆಕಾರರನ್ನು ಅಟ್ಟಿಕೊಂಡು ಹೋಗಿ ತಮ್ಮ ಆಯುಧಗಳಿಗೆ ಬಲಿಕೊಡುತ್ತಿದ್ದರು. ತಮ್ಮ ಯುವರಾಜನು ಭಟರೊಂದಿಗೆ ಕದನಕ್ಕೆ ಇಳಿದಿರುವುದನ್ನು ಕಂಡು ಪೌರರಿಗೂ ಪೌರುಷಬಂತು. ಅವರು ಕೈಗೆ ಸಿಕ್ಕಿದ ಆಯುಧವನ್ನು ಹಿಡಿದು ಪುಂಡಶತ್ರುಗಳ ಮೇಲೆ ಬಿದ್ದರು.

ಕೊಂಚಹೊತ್ತಿಗೆ ಚಂದ್ರವರ್ಮನು ತನಗೆದುರಾದ ಶತ್ರುಸೈನಿಕರನ್ನು ಕೊಲ್ಲುತ್ತ

ಉತ್ತರ ದ್ವಾರವನ್ನು ಸಮೀಪಿಸಿದನು. ಪಶ್ಚಿಮದಕಡೆ ಶತ್ರುಸಂಹಾರಮಾಡಲು ಹೊರಟ ಧೀರಮಲ್ಲನು ಅವನಿಗೆ ಅನತಿ ದೂರದಲ್ಲಿ ಕಾಣಿಸಿಕೊಂಡನು. ಆದರೆ ಅವನ ಹಿಂದೆಯೇ ಭಾರಿ ಅಶ್ವದಳವೊಂದು ಬರುತ್ತಿರುವುದನ್ನು ಚಂದ್ರವರ್ಮನು ಕಂಡನು.

ಧೀರಮಲ್ಲನು ತನ್ನ ಬಲದೊಂದಿಗೆ ಚಂದ್ರವರ್ಮನನ್ನು ಸಮೀಪಿಸಿ "ಯುವರಾಜ, ನಾವು ಈಗ ದುರ್ಗವನ್ನು ಸೇರಿಕೊಳ್ಳುವುದು ಉಚಿತ. ಸರ್ಪಕೇತನು ತಾನೇ ಮತ್ತಿಷ್ಟು ಸೈನ್ಯವನ್ನು ಕೂಡಿಸಿಕೊಂಡು ಪಟ್ಟಣವನ್ನು ಪ್ರವೇಶಿಸಿರುವನು. ಅಸಂಖ್ಯಾಕವಾದ ಶತ್ರು ಸೈನ್ಯದೊಂದಿಗೆ ನಾವು ಈಗ ಮುಖಾಮುಖಿ ಹೋರಾಡಹೋಗುವುದು ಆತ್ಮಹತ್ಯೆಗೆ ಸಮಾನ. ಒಮ್ಮೆ ನಮ್ಮ ದುರ್ಗವನ್ನು ಸೇರಿಕೊಂಡರೆ ಶತ್ರುಗಳನ್ನು ತಡೆಗಟ್ಟುವ ಅವಕಾಶವಿದೆ," ಎಂದನು.

ಸರ್ಪಕೇತನು ಮತ್ತಿಷ್ಟು ಸೈನ್ಯದೊಂದಿಗೆ ಪಟ್ಟಣವನ್ನು ಪ್ರವೇಶಿಸಿರುವನೆಂದು ತಿಳಿದ ಕೂಡಲೇ ಚಂದ್ರವರ್ಮನಿಗೆ ಗರಬಡಿದಂತಾಯಿತು. ಇದರಿಂದ ಒಂದು ಮಾತಿನಲ್ಲಿ ಹೇಳಬೇಕೆಂದರೆ ಸರ್ಪಕೇತನು ಮಾಯಾಯುದ್ಧವನ್ನು ತೊರೆದು, ಖಾಡಾಖಾಡಿಯಾಗಿ ದಂಡೋಪಾಯಕ್ಕೆ ಸಿದ್ಧನಾದನೆಂದಾಯಿತು.

ಚಂದ್ರವರ್ಮನು ತನ್ನ ಅಶ್ವವನ್ನು ಗಿರ್ರನೆ ಹಿಂದಕ್ಕೆ ತಿರುಗಿಸಿದನು. ತಕ್ಷಣವೇ ಸುಬಾಹು ಧೀರಮಲ್ಲರು ತಮ್ಮ ಕುದುರೆಗಳನ್ನು ಅಷ್ಟೇ ವೇಗದಿಂದ ಅವನ ಎಡಬಲಪಕ್ಕಗಳಲ್ಲಿ ಓಡಿಸಿದರು. ಅವರೊಂದಿಗೇ ವೀರಭಟರೂ ಅವರನ್ನು ಹಿಂಬಾಲಿಸಿಕೊಂಡು ಅರಮನೆಯ ದುರ್ಗದಕಡೆ ಹೊರಟರು.

ಅವರು ಅರಮನೆಯನ್ನು ಸಮೀಪಿಸುವ ವೇಳೆಗೆ ಮಹಾದ್ವಾರದಬಳಿ ಶತ್ರುಸೈನಿಕರ ಒಂದು ಗುಂಪು ಕಾಣಿಸಿತು. ಅವರು ರಾಜದ್ವಾರವನ್ನು ಒಡೆಯಲು ಯತ್ನಿಸುತ್ತಿದ್ದರು. ಭೀಕರವಾಗಿ ಗರ್ಜಿಸುತ್ತ ಚಂದ್ರವರ್ಮನು ತನ್ನ ಭಟರೊಂದಿಗೆ ಅವರಮೇಲೆರಗಿದನು.

[ಇನ್ನೂ ಇದೆ]





# ಪತಿಯನ್ನು ಗೆದ್ದ ಪತ್ನಿ

ಕೋಸಲದೇಶದ ರಾಜನಬಳಿ ವೀರಸೇನನೆಂಬ ಸಾಮಂತನಿದ್ದನು. ಆತನು ವೃದ್ಧಾಪ್ಯದಿಂದ ಸಾಯುವ ಸಮಯಕ್ಕೆ ಆತನಿಗೆ ಜಯಂತನೆಂಬ ವಯಸ್ಸಿಗೆ ಬಂದ ಮಗನಿದ್ದನು. ಜಯಂತನೊಂದಿಗೆ ಮಾಲಿನಿ ಎಂಬ ಹುಡುಗಿಯನ್ನೂ ಸಹ ಆತನು ಸಾಕುತ್ತಿದ್ದನು. ಒಬ್ಬ ವೈದ್ಯನ ಮಗಳು ಮಾಲಿನಿ. ಆಕೆಯ ತಂದೆ ವೈದ್ಯವೃತ್ತಿಯಲ್ಲಿ ಪ್ರತಿಭಾವಂತ. ಆತನು ಸಾಯುವಮುಂಚೆ ತನ್ನ ಔಷಧಿಗಳನ್ನು ಮಾಲಿನಿಗೆ ಒಪ್ಪಿಸಿ, ಅವುಗಳನ್ನು ಉಪಯೋಗಿಸುವ ರೀತಿಯನ್ನೂ ಅವಳಿಗೆ ವಿವರವಾಗಿ ಹೇಳಿದ್ದನು. ತಂದೆ ಸತ್ತನಂತರ ತಬ್ಬಲಿ ಮಾಲಿನಿಗೆ ವೀರಸೇನ ಮತ್ತು ಆತನ ಪತ್ನಿ ಲಕ್ಷ್ಮೀದೇವಿ ಆಸರೆಯನ್ನು ಕೊಟ್ಟು ತಮ್ಮ ಮಗಳಂತೆಯೇ ನೋಡಿಕೊಳ್ಳುತ್ತಿದ್ದರು.

ಮಾಲಿನಿ ತುಂಬಾ ಜಾಣೆ. ಮಿತಭಾಷಿ. ವಿನಯವಿಧೇಯತೆಗಳನ್ನು ಅರಿತ ಇಂಗಿತಜ್ಞಳು. ವೀರಸೇನನ ಮನೆಯಲ್ಲಿ ತನಗೆ ಸರ್ವಸ್ವಾತಂತ್ರ್ಯವಿದ್ದರೂ ಸಹ ಆಕೆ ತನಗೂ, ಅವರಿಗೂ ಇರುವ ಅಂತರವನ್ನು ಮಾತ್ರ ಮರೆತಿರಲಿಲ್ಲ. ಅಂತಲೇ ಆಕೆ ಬಾಲ್ಯದಿಂದಲೂ ಜಯಂತನನ್ನು ಪ್ರೇಮಿಸುತ್ತಿದ್ದರೂ ಸಹ, ತನ್ನ ಪ್ರೇಮವನ್ನು ತನ್ನ ಮನಸ್ಸಿನಲ್ಲೇ ಹುದುಗಿಸಿಕೊಂಡಳು. "ನರಿ ಎಲ್ಲಿ, ನಾಕಲೋಕವೆಲ್ಲಿ? ಜಯಂತನು ಯಾರೋ ಒಬ್ಬಳು ರಾಜಪುತ್ರಿಯನ್ನು ಮದುವೆಯಾಗುತ್ತಾನೆ. ನನ್ನಂತಹ ದಿಕ್ಕಿಲ್ಲದ ಪಕ್ಷಿಯನ್ನು ಆತನೇಕೆ ಮದುವೆಯಾದಾನು?" ಎಂದುಕೊಂಡಳು.

ಜಯಂತನೂ ಆಕೆಯನ್ನು ಕುರಿತು ಎಂದೂ ಆಲೋಚಿಸಿರಲಿಲ್ಲ. ಆಕೆ ವಿನಯಶಾಲಿಯಾದುದರಿಂದ ಎಂದೂ ಆತನ ಮನಸೆಳೆಯುವ ಪ್ರಯತ್ನಕ್ಕೆ ಹೋಗಿರಲಿಲ್ಲ.

ವೀರಸೇನನು ತೀರಿದನಂತರ ಕೋಸಲಾಧೀಶನು ಜಯಂತನಿಗೆ ಸುದ್ದಿ ಕಳುಹಿಸಿದನು. ರಾಜನಪರವಾಗಿ ಶಶಿಭೂಷಣನೆಂಬಾತನು ಜಯಂತನ ಮಾತೆಯಾದ ಲಕ್ಷ್ಮೀದೇವಿ

ಎಚ್. ಆರ್. ಮುಳಿಬೈಲು



ಯನ್ನು ಕಂಡು "ಅಮ್ಮಾ, ಮಹಾರಾಜರ ಆಸ್ಥಾನದಲ್ಲಿ ನಿಮ್ಮ ಪತಿಯ ಸ್ಥಾನಮಾನಗಳನ್ನು ಜಯಂತನಿಗೆ ಕೊಡಲು ನಿರ್ಧರಿಸಲಾಗಿದೆ. ಈಗ ಮಹಾ ಪ್ರಭುಗಳು ರೋಗ ಪೀಡಿತರಾಗಿದ್ದಾರೆ. ಅದು ಗುಣಹೊಂದುವ ಕಾಹಿಲೆ ಅಲ್ಲವೆಂದು ರಾಜವೈದ್ಯರು ಹೇಳಿದ್ದಾರೆ. ಆದುದರಿಂದ ತಡಮಾಡದೆ ತಮ್ಮ ಮಗ ಜಯಂತನನ್ನು ನನ್ನಸಂಗಡ ಕಳುಹಿಸಿಕೊಡಬೇಕು" ಎಂದು ಹೇಳಿದನು.

"ಅಯ್ಯೋ! ಈ ಸಮಯದಲ್ಲಿ ನಮ್ಮ ಮಾಲಿನಿಯ ತಂದೆ ಜೀವಿಸಿದ್ದಿದ್ದರೆ ಮಹಾರಾಜರ ಬೇನೆಯನ್ನು ವಾಸಿಮಾಡುತ್ತಿದ್ದರು" ಎಂದು ಲಕ್ಷ್ಮೀದೇವಿ ಹೇಳಿದಳು. ಇವರ ಈ ಸಂಭಾಷಣೆಯನ್ನು ಕೇಳುತ್ತಿದ್ದ ಮಾಲಿನಿಯ ನಯನಗಳು ತುಂಬಿಬಂದುವು. ತನ್ನ ತಂದೆಯನ್ನು ನೆನೆಸಿಕೊಂಡು ದುಃಖಿಸುತ್ತಿರುವಳೆಂದು ಲಕ್ಷ್ಮೀದೇವಿ ಭಾವಿಸಿದಳು. ಆದರೆ ಆಕೆಯ ವ್ಯಸನದ ಕಾರಣವೇ ಬೇರೆ. ಜಯಂತನು ಹೊರಟುಹೋಗುವನೆಂದು ಆಕೆ ದುಃಖಿತಳಾಗಿದ್ದಳು.

ಕೊಂಚ ದಿನಗಳಾದನಂತರ ಮಾಲಿನಿ ಲಕ್ಷ್ಮೀದೇವಿಯೊಂದಿಗೆ "ಅಮ್ಮಾ, ನಮ್ಮ ತಂದೆಯವರು ಕೆಲವಾರು ದಿವ್ಯ ಔಷಧಗಳನ್ನು ನನಗೆ ಒಪ್ಪಿಸಿದ್ದಾರೆ. ಬಹುಶಃ ಅದರಿಂದ ಕೋಸಲದರಸರ ಬೇನೆ ಗುಣವಾಗಬಹುದು. ನಾನು ಮಹಾರಾಜರ ಬಳಿಗೆ ಹೋಗಿ ಅವರಿಗೆ ಚಿಕಿತ್ಸೆಮಾಡಲು ಕಾತುರಳಾಗಿದ್ದೇನೆ" ಎಂದಳು.

ಲಕ್ಷ್ಮೀದೇವಿ ಮಂದಹಾಸದಿಂದ "ಎಲ ಎಲಾ, ಜೋಟುದ್ದದಹುಡುಗಿ, ನೀನು ಕೋಸಲದರಸರಿಗೆ ಚಿಕಿತ್ಸೆಮಾಡಲು ಹೋಗುವೆಯಾ, ಇಲ್ಲ ಜಯಂತನನ್ನು ನೋಡಲು ಹೋಗುವೆಯಾ, ಹೇಳು" ಎಂದಳು. ಲಕ್ಷ್ಮೀದೇವಿ ಒತ್ತಾಯಪಡಿಸಲು ಮಾಲಿನಿ ತನಗೆ ಜಯಂತನಲ್ಲಿರುವ ಅನುರಾಗವನ್ನು ವ್ಯಕ್ತಪಡಿಸಿದಳು. "ಆದರೆ ಅವರ ಮಡದಿಯಾಗಬೇಕೆಂಬ ದುರಾಶೆ ನನಗಿಲ್ಲ. ನೀವು ಸಾಮಂತರು. ನಾನೊ ನಿಮ್ಮ ಆಶ್ರಿತಳು. ಈಗ ನಾನು ಮಹಾಪ್ರಭುಗಳಿಗೆ ಚಿಕಿತ್ಸೆಮಾಡುವ ಉದ್ದೇಶದಿಂದಲೇ ಹೋಗಲಪೇಕ್ಷಿಸುತ್ತೇನೆ" ಎಂದಳು ಮಾಲಿನಿ. ಲಕ್ಷ್ಮೀದೇವಿ ಮಾಲಿನಿಯ ಪ್ರಯಾ

ಣಕ್ಕೆ ಸಮ್ಮತಿಸಿದಳು. ಆಕೆಯ ಸಂಗಡ ಕೆಲವು ನೌಕರರನ್ನು ಕಳುಹಿಸಿದಳು. ಮಾಲಿನಿ ಬಹು ಶೀಘ್ರವಾಗಿ ರಾಜಧಾನಿಯನ್ನು ತಲುಪಿದಳು. ತಾನು ಬಂದ ಕಾರ್ಯವನ್ನು ತಿಳಿಸಿ, ರಾಜನನ್ನು ಭೇಟಿಮಾಡಿದಳು.

ತನ್ನ ವ್ಯಾಧಿಗೆ ಒಬ್ಬ ಹೆಣ್ಣುಮಗಳು ಚಿಕಿತ್ಸೆಮಾಡಬಲ್ಲಳೇ ಎಂದು ರಾಜನು ಶಂಕಿಸಿದನು. ರಾಜವೈದ್ಯರೇ ಕೈಬಿಟ್ಟ ಕಾಹಿಲೆಗೆ ಔಷಧವಿರುವುದಾದರೂ ಹೇಗೆ?

"ಅಮ್ಮಾ, ಮಗೂ. ನಿನ್ನ ಔಷಧದಿಂದ ರೋಗ ಉಲ್ಬಣಿಸಿದರೆ ನಿನ್ನನ್ನು ಗಲ್ಲಿಗೇರಿಸುವೆನು. ನನ್ನ ರೋಗವಾಸಿಯಾದರೆ ನನ್ನ ಆಸ್ಥಾನದಲ್ಲಿರುವ ಸಾಮಂತರಪೈಕಿ ನೀನು ಮೆಚ್ಚಿದಾತನನ್ನು ಕೊಟ್ಟು ನಿನಗೆ ವಿವಾಹ ಮಾಡುತ್ತೇನೆ. ಅದು ಇಲ್ಲಿನ ಪದ್ಧತಿ. ಈ ಷರತ್ತಿಗೆ ನೀನು ಒಪ್ಪುವಂತಿದ್ದರೆ ನನಗೆ ನೀನು ಔಷಧವನ್ನು ಕೊಡಬಹುದು" ಎಂದ ರಾಜ.

ಮಾಲಿನಿ ಈ ವ್ಯವಸ್ಥೆಗೆ ಸಂತೋಷದಿಂದ ಒಪ್ಪಿಕೊಂಡಳು. ರಾಜನಿಗೆ ಚಿಕಿತ್ಸೆ ನಡೆಸಲು ಆರಂಭಿಸಿದಳು. ಒಂದೇ ಒಂದು ವಾರದಲ್ಲಿ ಕಾಹಿಲೆ ವಾಸಿಯಾಯಿತು. ರಾಜನ ಆನಂದಕ್ಕೆ ಪಾರವೇ ಇಲ್ಲ. ಆತನು ಮಾಲಿನಿಯನ್ನು ತನ್ನಸಂಗಡ ಸಭೆಗೆ ಕರೆದುಕೊಂಡು ಹೋಗಿ "ಈ ಸಭೆಯಲ್ಲಿರುವವರೆಲ್ಲ ನನ್ನ ಸಾಮಂತರು. ಇವರಲ್ಲಿ ನಿನಗೆ ಬೇಕಾದವರನ್ನು ಪತಿಯನ್ನಾಗಿ ಆರಿಸಿಕೊ" ಎಂದನು. ಮಾಲಿನಿ ಸುತ್ತಲೂ ಒಮ್ಮೆ ನೋಡಿದಳು.



ಆಕೆಗೆ ಜಯಂತನು ಕಾಣಿಸಿದನು. ಅರಸನಿಗೆ ಜಯಂತನನ್ನು ತೋರಿಸಿ "ಮಹಾಪ್ರಭು, ಅವರನ್ನು ಮದುವೆಯಾಗ ಬಯಸುವೆನು" ಎಂದಳು ಮಾಲಿನಿ. ರಾಜನು ಜಯಂತನನ್ನು ಕುರಿತು "ಜಯಂತ, ನೀನು ಈಕೆಯನ್ನು ವಿವಾಹಮಾಡಿಕೊ" ಎಂದನು.

ರಾಜನ ಮಾತನ್ನು ಕೇಳಿ ಜಯಂತನು ಉರಿದೆದ್ದನು. "ಇವಳು ನಮ್ಮ ಆಶ್ರಿತಳು. ನಮ್ಮ ಸೇವೆ ಮಾಡಿಕೊಂಡು ಜೀವಿಸುತ್ತಿರುವ ವ್ಯಕ್ತಿ. ಇವಳನ್ನು ನಾನು ಹೇಗೆ ವಿವಾಹವಾಗಲಿ?" ಎಂದು ದಿಟ್ಟತನದಿಂದ ಕೇಳಿದನು.

ಮಾಲಿನಿ ಅವಮಾನದಿಂದ ತಲೆತಗ್ಗಿಸಿ "ಮಹಾಪ್ರಭು, ತಮ್ಮ ಬೇನೆ ಗುಣವಾಯಿತು. ನನಗೆ ಅದೇ ಸಂತೋಷ" ಎಂದಳು.

ಆಕೆ ಸುಮ್ಮನಾದರೂ ರಾಜನು ಸುಮ್ಮ ನಿರಲಿಲ್ಲ. ಮಾಲಿನಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳದ ವಿಷಯಕ್ಕಿಂತಲೂ ತನ್ನ ಸಾಮಂತನೊಬ್ಬನು ತನ್ನನ್ನು ಪ್ರತಿಭ ಟಿಸಿದುದು ಆತನಿಗೆ ಸಹಿಸಲಾಗಲಿಲ್ಲ. ಜಯಂ ತನು ಮಾಲಿನಿಯನ್ನು ವಿವಾಹವಾಗಲೇ ಬೇಕೆಂದು ಆತನು ಹಠಹಿಡಿದನು. ಅಂದೇ ಅವರಿಬ್ಬರಿಗೂ ಮದುವೆಯಾಯಿತು.

ಆದರೆ ಜಯಂತನು ಮಾಲಿನಿಯನ್ನು ಪ್ರೇಮಿಸುವಂತೆ ಮಾಡುವ ಶಕ್ತಿ ರಾಜನಿಗಿರ ಲಿಲ್ಲ. ವಿವಾಹಶಾಸ್ತ್ರ ಮುಗಿದನಂತರ ಜಯಂ ತನು ತನ್ನ ಪತ್ನಿಯೊಂದಿಗೆ "ಮನೆಸಾರಿಸಿ ದಾಕ್ಷಣಕ್ಕೆ ಹಬ್ಬವಾಗಲಿಲ್ಲ. ನನ್ನನ್ನು ಬಲತ್ಕಾರವಾಗಿ ವಿವಾಹಮಾಡಿಕೊಂಡೆ. ಆದರೆ ನಾನು ನಿನ್ನೊಂದಿಗೆ ಸಂಸಾರಮಾಡಲಾರೆ. ನೀನು ಕೂಡಲೇ ನಮ್ಮ ತಾಯಿಯಬಳಿಗೆ ಹೊರಟುಬಿಡು" ಎಂದನು.

"ನಾನು ನಿಮ್ಮ ದಾಸಿ. ನನ್ನ ಅದೃಷ್ಟ ವಿದ್ದಂತೆ ಆಗಲಿ" ಎಂದಳು ಮಾಲಿನಿ ಹತಾಶ ಳಾಗಿ. ಆಕೆ ರಾಜಧಾನಿಗೆ ಹೋದ ಕೆಲಸ ನೆರವೇರಿತು. ರಾಜನ ವ್ಯಾಧಿ ಗುಣವಾಯಿತು. ತಾನು ಪ್ರೇಮಿಸಿದ ಜಯಂತನನ್ನು ವಿವಾಹ ವಾದಳು. ಆದರೂ ಆಕೆ ಲಕ್ಷ್ಮೀದೇವಿಯ ಬಳಿಗೆ ದುಃಖಪೂರಿತಳಾಗಿ ಹಿಂತಿರುಗಿದಳು. ಆಕೆಯ ಹಿಂದೆಯೇ ಜಯಂತನಿಂದ ಆಕೆ ಗೊಂದು ಪತ್ರ ಬಂತು. ಆದರಲ್ಲಿ 'ನನ್ನ ಬೆರಳಲ್ಲಿರುವ ಉಂಗುರ ನಿನ್ನ ಕೈಗೆ ಬಂದಂದು ನನ್ನನ್ನು ಗಂಡನೆಂದು ಕರೆ. ಆದರೆ ಆ ದಿನ



ಬರಲಾರದು, ನೆನಪಿರಲಿ' ಎಂದು ಬರೆದಿದ್ದನು. ಪತ್ರ ನೋಡಿ ಮಾಲಿನಿ ಕುಸಿದುಬಿದ್ದಳು.

ಲಕ್ಷ್ಮೀದೇವಿಮಾತ್ರ ತನ್ನ ಸೊಸೆಯನ್ನು ಬಹಳ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದಳು. ಮಾಲಿನಿಯೊಂದಿಗೆ ಮಗನ ವರ್ತನೆ ಕಂಡು ಆಕೆ ಮಮ್ಮಲ ಮರುಗಿದಳು. ಸಾಧ್ಯವಾದಷ್ಟೂ ಮಾಲಿನಿಯನ್ನು ಸಮಾಧಾನಪಡಿಸುತ್ತಿದ್ದಳು.

ಜಯಂತನು ಮಾಲಿನಿಗೆ ಬರೆದ ಕಾಗದದಲ್ಲಿ ತಾನು ಕೋಸಲದೇಶವನ್ನು ಬಿಟ್ಟು ಹೋಗುತ್ತಿರುವುದಾಗಿ ತಿಳಿಸಿದ್ದನು. ಮಾಲಿನಿಯಿಲ್ಲವೆಂಬ ಸುದ್ದಿ ಬಂದನಂತರಮಾತ್ರ ತಾನು ಮತ್ತೆ ಕೋಸಲದೇಶಕ್ಕೆ ಬರುವುದಾಗಿ ಬರೆದಿದ್ದನು. "ಗಂಡನನ್ನು ದೇಶಾಂತರ ಕಳುಹಿಸಿ ಮಹಾಪಾಪವನ್ನು ಮೂಟೆಕಟ್ಟಿಕೊಂಡೆ. ಈ ಪಾಪಪರಿಹಾರಕ್ಕಾಗಿ ನಾನು ತೀರ್ಥಯಾತ್ರೆ ಮಾಡಲು ಹೊರಟಿದ್ದೇನೆ. ನಿರಾಕೃತಳಾದ ಪತ್ನಿ ದೂರವಾದಳೆಂದು ನಿಮ್ಮ ಮಗನಿಗೆ ಕೂಡಲೇ ಸುದ್ದಿ ಕಳುಹಿಸಿ" ಎಂದು ಅತ್ತೆಗೆ ಒಂದು ಕಾಗದ ಬರೆದಿಟ್ಟು ಮಾಲಿನಿ ಯಾರೊಂದಿಗೂ ಹೇಳದೆ ಹೊರಟುಬಿಟ್ಟಳು.

ಕೋಸಲದೇಶವನ್ನು ಬಿಟ್ಟ ಜಯಂತನು ಕಾಶೀರಾಜನ ಆಸ್ಥಾನದಲ್ಲಿ ಒಂದು ನೌಕರಿಯನ್ನು ಸಂಪಾದಿಸಿದನು. ಅವನು ನೌಕರಿಗೆ ಸೇರಿದ ಕೆಲವೇ ದಿನಗಳಲ್ಲಿ ಕಾಶಿರಾಜ್ಯಕ್ಕೂ, ನೆರೆರಾಜ್ಯಕ್ಕೂ ಯುದ್ಧ ಸಂಭವಿಸಿತು. ಆ ಯುದ್ಧದಲ್ಲಿ ಜಯಂತನು ತುಂಬಾ ಪರಾಕ್ರಮದಿಂದ ಹೋರಾಡಿ ಎಲ್ಲರ ಮನ್ನಣೆಗೆ ಪಾತ್ರನಾದನು. ಅದೇ ಸಮಯಕ್ಕೆ ಅವನಿಗೆ ತಾಯಿ





ಯಿಂದ ಮಾಲಿನಿ ಮನೆಬಿಟ್ಟು ಹೊರಟು ಹೋದಳೆಂಬ ಸುದ್ದಿ ಬಂತು. ಅವನು ಆನಂದ ದಿಂದ ಸ್ವದೇಶಕ್ಕೆ ತೆರಳಲು ಸಿದ್ಧನಾಗುತ್ತಿದ್ದನು.

ಹೀಗಿರಲು ಮಾಲಿನಿ ಕಾಶಿನಗರವನ್ನು ಸೇರಿ ಕೊಂಡಳು. ಆಕೆಗೆ ವಿಮಲಾದೇವಿಯೆಂಬ ವಿಧವೆ ಆಶ್ರಯ ಕೊಟ್ಟಳು. ವಿಮಲಾ ದೇವಿಯ ಗಂಡನು ತುಂಬಾ ಗೌರವದಿಂದ ಬಾಳಿಬದುಕಿದ್ದನು. ಆದರೆ ಆತನು ಮರಣ ಹೊಂದಿದನಂತರ ವಿಮಲಾದೇವಿ ಮತ್ತು ಆಕೆಯ ಮಗಳು ನೀಲವೇಣಿ ನಿರ್ಗತಿಕ ರಾದರು. ವಿಮಲಾದೇವಿ ಯಾತ್ರಿಕರಿಗೆ ವಸತಿ ಸೌಕರ್ಯವನ್ನು ಒದಗಿಸಿ, ಅವರ ಅನುಗ್ರಹ ದಿಂದ ಕಾಲನೂಕುತ್ತಿದ್ದಳು. ಅವಳ ಮಗಳು ನೀಲವೇಣಿ ಸುಂದರಿ. ಆಕೆಗೆ ಮದುವೆಯ ವಯಸ್ಸು ಬಂದಿತ್ತು. ಕಾಶಿರಾಜನ ಆಸ್ಥಾನ ದಲ್ಲಿ ನೌಕರಿ ಪಡೆದನಂತರ ಜಯಂತನು ನೀಲವೇಣಿಯನ್ನು ಒಮ್ಮೆ ನೋಡಿದನು. ಆಕೆ ಯಲ್ಲಿ ಅವನಿಗೆ ಅನುರಾಗವುಂಟಾಯಿತು. ಆಕೆ ಯನ್ನು ವಿವಾಹವಾಗುವ ಬಯಕೆಯಾಯಿತು. ಏಕಾಂತವಾಗಿ ಮಾತನಾಡಲು ತನಗೊಮ್ಮೆ ಅವಕಾಶ ಕೊಡಬೇಕೆಂದು ನೀಲವೇಣಿಗೆ ಪತ್ರ ಬರೆದನು. ನೀಲವೇಣಿ ಸಂಕುಚಿತ ಹೃದಯ ಳಲ್ಲ. ಬಡವಳಾದರೂ ಉತ್ತಮ ಕುಲದ ಯುವತಿಯವಳು. ಜಯಂತನಿಗೆ ಈಮೊದಲೇ ವಿವಾಹವಾಗಿರುವುದಾಗಿಯೂ, ಕೈಹಿಡಿದ ಪತ್ನಿಯನ್ನು ಪರಿತ್ಯಜಿಸಿ ಕಾಶಿರಾಜ್ಯಕ್ಕೆ ಬಂದಿರುವನೆಂದೂ ಆಕೆಗೆ ತಿಳಿದಿತ್ತು. ಎಂತಲೇ ಆಕೆ ಅವನನ್ನು ಭೇಟಿಮಾಡಲು ಒಪ್ಪಿಗೆಯನ್ನು ಕೊಟ್ಟಿರಲಿಲ್ಲ.

ಎಲ್ಲವನ್ನೂ ಕೇಳಿದನಂತರ ಮಾಲಿನಿಗೆ ಒಂದು ಆಲೋಚನೆ ಹೊಳೆಯಿತು. ಆಕೆ ವಿಮಲಾದೇವಿಯೊಂದಿಗೆ ತನ್ನ ಪರಿಚಯ ತಿಳಿಸಿ, ತನ್ನ ಪತಿಯನ್ನು ಪಡೆಯಲು ತನಗೆ ಸಹಾಯ ನೀಡಬೇಕೆಂದು ಆಕೆಯನ್ನು ಬೇಡಿ ಕೊಂಡಳು. ಮರುಕಗೊಂಡ ವಿಮಲಾದೇವಿ ಆಕೆಗೆ ಸಹಾಯಮಾಡಲು ಒಪ್ಪಿಕೊಂಡಳು.

"ಈಸಾರಿ ಅವರು ನಿಮ್ಮ ಮಗಳೊಂದಿಗೆ ಮಾತನಾಡಬಯಸಿದರೆ ಒಪ್ಪಿಕೊಳ್ಳುವಂತೆ ನಿಮ್ಮ ಮಗಳಿಗೆ ಹೇಳಿ. ಅವರು ಬಂದಾಗ ನಿಮ್ಮ ಮಗಳಬದಲಾಗಿ ನಾನು ಅವರನ್ನು ಕಂಡು ಮಾತನಾಡುತ್ತೇನೆ. ಇದೇ ನೀವು

ನನಗೆ ಮಾಡಬೇಕಾದ ಸಹಾಯ" ಎಂದಳು ಮಾಲಿನಿ. ತನಗೆ ಸಹಾಯಮಾಡಿದರೆ ಅವರಿಗೆ ಉಡುಗೊರೆ ಕೊಡುವುದಾಗಿ ಮಾಲಿನಿ ಆಶೆ ತೋರಿಸಿದಳು. ತಾಯಿ ಮತ್ತು ಮಗಳು ಮಾಲಿನಿಯ ಮಾತಿನಂತೆ ನಡೆಯಲು ಸಮ್ಮತಿಸಿದರು.

ಮಾರನೇಯ ದಿನ ತನ್ನ ದೇಶಕ್ಕೆ ಹೊರಡಲಿದ್ದ ಜಯಂತನಿಗೆ ಯಾರೋ ಬಂದು, ಮಾಲಿನಿ ಪ್ರಯಾಣಮಾಡುತ್ತಿದ್ದಾಗ ಮಾರ್ಗಮಧ್ಯದಲ್ಲಿ ಸತ್ತುಹೋದಳೆಂದು ತಿಳಿಸಿದರು. ಇದೂಸಹ ಮಾಲಿನಿ ಹೂಡಿದ ಆಟವೇ ಆಗಿತ್ತು. ಈ ವಾರ್ತೆ ಕೇಳಿ ಜಯಂತನ ಆನಂದ ಇಮ್ಮಡಿಸಿತು. ಬಹುಶಃ ಈಗ ನೀಲವೇಣಿ ತನ್ನನ್ನು ಮದುವೆಯಾಗಲು ಒಪ್ಪಬಹುದೆಂದು ಅವನು ಭಾವಿಸಿದನು. ಸ್ವದೇಶಕ್ಕೆ ಹಿಂದಿರುಗುವ ಮುನ್ನ ಒಮ್ಮೆ ಆಕೆಯನ್ನು ಭೇಟಿಮಾಡಲು ಅವಕಾಶ ಕೊಡಬೇಕೆಂದು ನೀಲವೇಣಿಗೆ ಸುದ್ದಿ ಕಳುಹಿಸಿದನು. ಅವನು ಬಯಸಿದಂತೆ ನೀಲವೇಣಿ ಅವನನ್ನು ಅಂದುರಾತ್ರಿ ತನ್ನ ಮನೆಯಲ್ಲಿ ಭೇಟಿಮಾಡಲು ಸಮ್ಮತಿಸಿದಳು.

ಕತ್ತಲಾದನಂತರ ಜಯಂತನು ನೀಲವೇಣಿಯ ಮನೆಗೆ ಹೋದನು. ದಾಸಿಯೊಬ್ಬಳು ನೀಲವೇಣಿಯಿದ್ದ ಕೋಣೆಯನ್ನು ಅವನಿಗೆ ತೋರಿಸಿದಳು. ಆ ಕತ್ತಲಲ್ಲಿ ತನಗಾಗಿ ಕಾದಿದ್ದಾಕೆ ತನ್ನ ಮಡದಿ ಮಾಲಿನಿಯೆಂದು ಅವನಿಗೆ ತಿಳಿದಿರಲಿಲ್ಲ. ಆಕೆ ನೀಲವೇಣಿ ಎಂತಲೇ ನಂಬಿ ಆಕೆಯಲ್ಲಿ ತನಗಿರುವ ಪ್ರೇಮವನ್ನು ತೋಡಿಕೊಂಡನು.



ಮಾಲಿನಿಸಹ ತನಗೆ ಅವನಲ್ಲಿರುವ ಪ್ರೇಮವನ್ನು ಬಣ್ಣಿಸಿದಳು. ಆಕೆಯ ಮಾತುಗಳನ್ನು ಕೇಳುತ್ತಿದ್ದಂತೆ ಅವನ ಆನಂದ ತುಂಬಿತುಳುಕುತಿತ್ತು. ಮಾಲಿನಿಯು ನೀಲವೇಣಿಯಂತೆ ನಟಿಸುತ್ತಿದ್ದರೂ ವಾಸ್ತವವಾಗಿ ತನ್ನ ಮನಸ್ಸಿನಲ್ಲಿ ಹುದುಗಿದ್ದ ಭಾವಗಳನ್ನು ವ್ಯಕ್ತಪಡಿಸುತ್ತಿದ್ದಳು. ಇಂತಹ ಅವಕಾಶ ಆಕೆಗೆ ಎಂದೂ ಸಿಕ್ಕಿರಲಿಲ್ಲ. ಅಂತೂ ಈಗ ಆ ಅವಕಾಶವನ್ನು ಸದುಪಯೋಗಪಡಿಸಿಕೊಂಡಳು.

"ನೀಲವೇಣಿ, ನನ್ನನ್ನು ಇಷ್ಟೊಂದು ಪ್ರೀತಿಸುವೆಯೆಂದು ನಾನು ಕನಸಿನಲ್ಲೂ ನೆನೆಸಿರಲಿಲ್ಲ. ನಾನು ನಾಳೆ ನಮ್ಮ ದೇಶಕ್ಕೆ ಹಿಂತಿರುಗುತ್ತಿದ್ದೇನೆ. ಅಲ್ಲಿ ಸಕಲ ಏರ್ಪಾಟುಗಳನ್ನು ಮಾಡಿದನಂತರ ನಿನ್ನನ್ನು ಕರೆಯಿಸಿ

ಕೊಂಡು ವಿವಾಹವಾಗುತ್ತೇನೆ'' ಎಂದನು ಜಯಂತ. "ನಿಮ್ಮ ಜ್ಞಾಪಕಾರ್ಥವಾಗಿ ನಿಮ್ಮ ಬಳಿಯಿರುವ ಉಂಗುರವನ್ನು ನನಗೆ ಕೊಡಿ'' ಎಂದಳು ಮಾಲಿನಿ. ಆಕೆ ಅವನ ಉಂಗುರವನ್ನು ತೆಗೆದುಕೊಂಡು, ತನಗೆ ಕೋಸಲ ರಾಜನು ಕೊಟ್ಟಿದ್ದ ಉಂಗುರವನ್ನು ಅವನಿಗೆ ತನ್ನ ಪ್ರೇಮದ ಗುರುತಾಗಿ ಕೊಟ್ಟಳು.

ಮಾಲಿನಿಯ ಸಂಭಾಷಣೆಯನ್ನು ನೆನೆಸಿಕೊಳ್ಳುತ್ತ ಜಯಂತನು ಮಾರನೇಯದಿನವೇ ತನ್ನ ದೇಶಕ್ಕೆ ಹಿಂತಿರುಗಿದನು. ಅಂದೇ ಮಾಲಿನಿಸಹ ತನ್ನೊಂದಿಗೆ ವಿಮಲಾದೇವಿ ಮತ್ತು ನೀಲವೇಣಿಯರೊಂದಿಗೆ ಕೋಸಲ ದೇಶಕ್ಕೆ ಹೊರಟಳು. ಆದರೆ ಆಕೆ ಆ ಸ್ಥಳವನ್ನು ಸೇರಿಕೊಳ್ಳುವವೇಳೆಗೆ ರಾಜನು ಜಯಂತನ ತಾಯಿಯನ್ನು ಕಾಣಲು ಹೋಗಿರುವುದಾಗಿ ತಿಳಿಯಬಂತು. ಆಕೆ ಸಹ ಅಲ್ಲಿಗೆ ಹೋದಳು.

ರಾಜನು ಲಕ್ಷ್ಮೀದೇವಿಯನ್ನು ಕಂಡ ಕೂಡಲೇ ಮಾಲಿನಿಯನ್ನು ಕುರಿತು ವಿಚಾರಿಸಿದನು. ಆದರೆ ಮಾಲಿನಿ ಸತ್ತುಹೋದ ಸುದ್ದಿ ಲಕ್ಷ್ಮೀದೇವಿಗೆ ಜಯಂತನು ಹೇಳಿದ್ದನು. ಮಾಲಿನಿಯ ಮರಣವಾರ್ತೆ ಕೇಳಿ ರಾಜನು ತುಂಬಾ ವ್ಯಾಕುಲಗೊಂಡನು. ರಾಜನೊಂದಿಗೆ ಬಂದಿದ್ದ ಶಶಿಭೂಷಣನು "ಜಯಂತನು ನಿರ್ಭಾಗ್ಯನು. ಅವನು ರಾಜನಿಗೆ, ತಾಯಿಗೆ ಮಡದಿಗೆ ದ್ರೋಹಮಾಡಿದ್ದಾನೆ. ಎಲ್ಲಕ್ಕಿಂತಲೂ ಹೆಚ್ಚಾಗಿ ತನಗೆ ತಾನೇ ದ್ರೋಹಮಾಡಿಕೊಂಡಿದ್ದಾನೆ. ಮಾಲಿನಿಯಂತಹ ಸುಂದರಿ, ಬುದ್ಧಿವಂತಳು, ಜಾಣೆ ಮತ್ತೆಲ್ಲಿಯೂ ಸಿಗ



ಲಾರಳು" ಎಂದನು. ಜಯಂತನನ್ನು ಕೂಡಲೇ ತನ್ನಬಳಿಗೆ ಕರೆಯಿಸುವಂತೆ ರಾಜನು ಆಜ್ಞಾಪಿಸಿದನು. ಅದರಂತೆ ಜಯಂತನು ಬಂದು ರಾಜನಿಗೆ ವಿನಯಪೂರ್ವಕವಾಗಿ ವಂದಿಸಿದನು. ಮತ್ತು ತಾನು ಮಾಡಿದ ತಪ್ಪಿಗೆ ಕ್ಷಮೆಕೋರಿದನು.

ಪೂಜ್ಯಳಾದ ನಿನ್ನ ತಾಯಿಯ ಮುಖ ನೋಡಿ, ಗತಿಸಿದ ನಿನ್ನ ತಂದೆಯವರೊಂದಿಗೆ ನನಗಿದ್ದ ಸಂಬಂಧವನ್ನು ನೆನೆಸಿಕೊಂಡು ನಿನ್ನನ್ನು ಕ್ಷಮಿಸಿರುವೆನು" ಎಂದು ಹೇಳುತ್ತಿರಲು, ಆತನಿಗೆ ಜಯಂತನ ಬೆರಳಲ್ಲಿ ತಾನು ಮಾಲಿನಿಗೆ ಬಹುಮಾನವಾಗಿ ಕೊಟ್ಟ ಉಂಗರ ಕಾಣಿಸಿತು. ಅದನ್ನು ಮತ್ತೆ ಯಾರಿಗೂ ಕೊಡುವುದಿಲ್ಲವೆಂದೂ, ಒಂದುವೇಳೆ ತನಗೆ ಯಾವುದಾದರೂ ಪ್ರಮಾದ ಒದಗಿದರೆಮಾತ್ರ ಅದನ್ನು ಒಪ್ಪಿಸುವುದಾಗಿಯೂ ಮಾಲಿನಿ ಪ್ರಮಾಣಮಾಡಿ ಹೇಳಿದ್ದಳು. ಆ ಉಂಗುರ ಜಯಂತನ ಬೆರಳಲ್ಲಿರುವುದನ್ನು ಕಂಡು, ಅವನು ಮಾಲಿನಿಯನ್ನು ರಹಸ್ಯವಾಗಿ ಕೊಲೆಮಾಡಿರಬೇಕೆಂದು ರಾಜನಿಗೆ ಅನುಮಾನ ಬಂತು. ಜಯಂತನನ್ನು ಬಂಧಿಸುವಂತೆ ಭಟರಿಗೆ ರಾಜನು ಆಜ್ಞೆಮಾಡಿದನು. "ಇದು ನಿನಗೆ ಹೇಗೆ ಸಿಕ್ಕಿತು?" ಎಂದು ಜಯಂತನನ್ನು ಕೇಳಿದನು. ಯಾವಳೋ ತನ್ನಕಡೆಗೆಸೆದಳೆಂದು ಜಯಂತನು ಕಾಕಮ್ಮನ ಕಥೆ ಹೇಳಿದನು.

ಇಷ್ಟರಲ್ಲಿ ಅಲ್ಲಿಗೆ ವಿಮಲಾದೇವಿ, ನೀಲವೇಣಿಯರು ಬಂದರು. "ಮಹಾಪ್ರಭು, ಈ ಜಯಂತನು ನನ್ನ ಮಗಳನ್ನು ಮದುವೆ



ಯಾಗುವುದಾಗಿ ಹೇಳಿ ಪ್ರಮಾಣಮಾಡಿರುತ್ತಾನೆ. ಆತನು ತನ್ನ ಮಾತು ಉಳಿಸಿಕೊಳ್ಳುವಂತೆ ನೀವು ಅಪ್ಪಣೆ ಕೊಡಬೇಕು" ಎಂದು ಕೇಳಿಕೊಂಡಳು ವಿಮಲಾದೇವಿ.

ರಾಜಾಜ್ಞೆಗೆ ಹೆದರಿ ಜಯಂತನು ತಾನು ನೀಲವೇಣಿಯನ್ನು ಮದುವೆಯಾಗುವೆನೆಂದು ಮಾತುಕೊಟ್ಟ ವಿಷಯ ಸರಿಯೆಂದು ಹೇಳಿದನು. ಕೂಡಲೇ ನೀಲವೇಣಿ ರಾಜನಿಗೆ ತನ್ನಲ್ಲಿದ್ದ ಉಂಗುರವನ್ನು ತೋರಿಸಿ "ಈ ಉಂಗುರವನ್ನು ನನಗೆ ಕೊಟ್ಟು ನನ್ನ ಬೆರಳಲ್ಲಿದ್ದ ಉಂಗುರವನ್ನು ಅವರು ತೆಗೆದುಕೊಂಡಿದ್ದಾರೆ" ಎಂದಳು.

ಈ ನಾಟಕವಾಡಲು ಮಾಲಿನಿ ಜಯಂತನು ತನಗೆ ಕೊಟ್ಟಿದ್ದ ಉಂಗುರವನ್ನು ನೀಲವೇಣಿಗೆ ಕೊಟ್ಟಿದ್ದಳು. ಮಾಲಿನಿಯ ಕೊಲೆಯಲ್ಲಿ ಈ ತಾಯಿಮಗಳಿಗೂ ಸಂಬಂಧವಿರಬೇಕೆಂದು ರಾಜನಿಗೆ ಸಂಶಯವಾಯಿತು.

"ಜಯಂತನ ಕೈಯಲ್ಲಿರುವ ಉಂಗುರ ನಿಮಗೆ ಹೇಗೆ ಬಂದಿತು? ನಿಜ ಹೇಳಿ. ಇಲ್ಲದಿದ್ದರೆ ನಿಮಗೆ ಕಠಿನಶಿಕ್ಷೆ ವಿಧಿಸುತ್ತೇನೆ" ಎಂದು ಅಬ್ಬರಿಸಿದನು ಅರಸ.

"ಮಹಾಪ್ರಭು, ಆಗ್ರಹಗೊಳ್ಳಬೇಡಿ. ಆ ಉಂಗುರವನ್ನು ನಾವೊಬ್ಬ ವ್ಯಕ್ತಿಯಿಂದ ಪಡೆದೆವು. ಆಕೆಯನ್ನು ನಿಮ್ಮಮುಂದೆ ನಿಲ್ಲಿಸುತ್ತೇವೆ" ಎಂದು ವಿಮಲಾದೇವಿ ಹೊರಗೆ ಹೋಗಿ ಮಾಲಿನಿಯನ್ನು ಕರೆತಂದಳು.

ಮಾಲಿನಿ ಕಾಣಿಸಿದಕೂಡಲೇ ರಾಜನಿಗೂ, ಜಯಂತನ ತಾಯಿಗೂ ಪರಮಾನಂದವಾಯಿತು. ಆಕೆಯ ಕಥೆಯನ್ನೆಲ್ಲಾ ಕೇಳಿ ಜಯಂತನಿಗೆ ಅಪಾರ ಆಶ್ಚರ್ಯವಾಯಿತು. ಅಂದುರಾತ್ರಿ ಆಕೆಯೊಂದಿಗೆ ತಾನು ನಡೆಸಿದ ಸಂಭಾಷಣೆಯನ್ನು ಅವನಿನ್ನೂ ಮರೆತಿರಲಿಲ್ಲ. ಅಂದು ತನ್ನೊಂದಿಗೆ ಮಾತನಾಡಿದುದು ತಾನು ತಾಳಿಕಟ್ಟಿದ ಮಡದಿಯೇ ಎಂದು ತಿಳಿದು ಅವನಿಗೆ ಮತ್ತಷ್ಟು ಸಂತೋಷವಾಯಿತು. ಅವನು ತನ್ನ ಮಡದಿಗೆ ಕ್ಷಮಾಪಣೆ ಸಲ್ಲಿಸಿ, ಅಂದಿನಿಂದ ಆಕೆಯೊಂದಿಗೆ ಸುಖವಾಗಿ ಪ್ರೇಮದಿಂದ ಜೀವಿಸತೊಡಗಿದನು.






## 5

[ತನ್ನ ಪ್ರಿಯಳನ್ನು ಉದ್ಯಾನವನದಲ್ಲಿ ಇಳಿಸಿ, ಕುದುರೆಯನ್ನು ಅಲ್ಲಿಟ್ಟು ಅಕ್ಮಾರ್ ತನ್ನ ತಂದೆಯೊಂದಿಗೆ ಮಾತನಾಡಲು ಹೋದ ಸಮಯದಲ್ಲಿ ಸಿದ್ಧನು ಅತ್ತಕಡೆ ಬಂದು ರಾಜಕುಮಾರಿಯೊಂದಿಗೆ ಪುಸಿನುಡಿದು ಆಕೆಯನ್ನು ಕೀಲುಕುದುರೆಯಮೇಲೇರಿಸಿಕೊಂಡು ರೂಮ್ ದೇಶವನ್ನು ಸೇರಿ ಅಲ್ಲಿಯ ಸುಲ್ತಾನನ ಬಂದಿಯಾದನು. ಸುಲ್ತಾನನಿಗೆ ರಾಜಕುಮಾರಿಯನ್ನು ವಿವಾಹವಾಗುವ ಬಯಕೆಯುಂಟಾಯಿತು. ಆದರೆ ಆಕೆಗೆ ಹುಚ್ಚು ಹಿಡಿದಿತ್ತು. ಇತ್ತ ಅಕ್ಮಾರ್ ತನ್ನ ಪ್ರಿಯಳನ್ನು ಹುಡುಕುತ್ತಾ ಹೊರಟು, ರೂಮ್ ದೇಶವನ್ನು ಸೇರಿಕೊಂಡನು. ಪರಸ್ಥಳದವರನ್ನು ರಾಜನು ಪ್ರಶ್ನಿಸಿದನಂತರವೇ ಅವರು ನಗರವನ್ನು ಪ್ರವೇಶಿಸಬೇಕೆಂಬ ನಿಯಮವಿತ್ತು. ಅಂತಲೇ ರಾಜಭಟರು ಅಕ್ಮಾರನನ್ನು ಅಂದು ಬಂದೀಖಾನೆಯಲ್ಲಿಟ್ಟರು. ಅಲ್ಲಿ ಸಿದ್ಧನಿಗೂ ಅಕ್ಮಾರನಿಗೂ ಸಂಭಾಷಣೆ ನಡೆಯಿತು. ಅಕ್ಮಾರನಿಗೆ ಸಿದ್ಧನ ಗುರುತು ತಿಳಿದಿದ್ದರೂ, ಸಿದ್ಧನಿಗೆ ಅಕ್ಮಾರನ ಗುರುತು ತಿಳಿಯದು.]

**ಮೂ**ರನೇಯ ದಿನ ಮುಂಜಾನೆ ರಾಜಭಟರು ಸೆರೆಮನೆಯಲ್ಲಿದ್ದ ಅಕ್ಮಾರನನ್ನು ಸುಲ್ತಾನನ ಮುಂದೆ ತಂದು ನಿಲ್ಲಿಸಿದರು. ಅವನು ಪರಸ್ಥಳದವನೆಂದೂ, ಹಿಂದಿನದಿನ ಸಂಜೆಹೊತ್ತು ಮೀರಿದ್ದುದರಿಂದ ಪ್ರಭುಗಳಮುಂದೆ ಹಾಜರು ಪಡಿಸಲು ಅವಕಾಶವಾಗಲಿಲ್ಲವೆಂದೂ ಸೆರೆಮನೆಯ ಅಧಿಕಾರಿಗಳು ಸುಲ್ತಾನನಲ್ಲಿ ಮನವಿ ಮಾಡಿಕೊಂಡರು.

ಸುನಂದಾದೇವಿ



ಸುಲ್ತಾನನು ಅಕ್ಮಾರನನ್ನು ಅವನ ವಿಷಯವಾಗಿ ಪ್ರಶ್ನಿಸಿದನು. "ನನ್ನ ಹೆಸರು ಹರ್ಜಾ. ನನ್ನದು ಪರ್ಷಿಯಾದೇಶ. ನಾನು ಮನೋವ್ಯಾಧಿಗಳಿಗೆ ಚಿಕಿತ್ಸೆಮಾಡುತ್ತಾ ದೇಶದೇಶಗಳಲ್ಲಿ ಸಂಚರಿಸುತ್ತಿದ್ದೇನೆ. ಭಾರಿ ಭಾರಿ ರುಮಾಲು ಸುತ್ತಿ, ಪಂಚಾಂಗ ನೋಡಿ ಚಿಕಿತ್ಸೆ ಮಾಡುವ ಪದ್ಧತಿ ನನಗೆ ಸರಿಬೀಳದು. ನನಗೆ ಮಂತ್ರತಂತ್ರಗಳಲ್ಲಿ ನಂಬಿಕೆಯಿಲ್ಲ" ಎಂದು ಅಕ್ಮಾರ್ ಉತ್ತರವಿತ್ತನು.

ಸುಲ್ತಾನನು ಹರ್ಷಿತನಾಗಿ "ನಿನ್ನಂತಹ ವೈದ್ಯನ ಸಹಾಯ ನನಗೆ ಅತ್ಯಂತ ಅಗತ್ಯವಾಗಿದೆ. ನಾನೊಬ್ಬ ಕನ್ಯೆಯನ್ನು ವಿವಾಹವಾಗಲು ಪ್ರಯತ್ನಿಸಿದೆ. ಆದರೆ ಆಕೆ ಭೂತಪೀಡಿತಳಾಗಿದ್ದಾಳೆ. ಆಕೆಗೆ ಚಿಕಿತ್ಸೆಮಾಡಿ, ಸರಿಮಾಡಿದರೆ ನೀನು ಕೋರಿದುದನ್ನು ಖಂಡಿತವಾಗಿ ಕೊಡುತ್ತೇನೆ" ಎಂದನು.

"ಮಹಾಪ್ರಭುಗಳನ್ನು ಅಲ್ಲಾ ಕರುಣಿಸಲಿ. ಯಾವ ಪರಿಸ್ಥಿತಿಯಲ್ಲಿ ಆಕೆಯ ಬುದ್ಧಿ ಕೆಟ್ಟಿತೋ ತಾವು ಹೇಳಬಲ್ಲಿರಾ?" ಅಕ್ಮಾರ್ ಕೇಳಿದನು.

ಸುಲ್ತಾನನು ನಡೆದ ವಿಷಯವನ್ನು ತಿಳಿಸಿ "ಆ ಮುದುಕನನ್ನು ಕತ್ತಲೆಕೋಣೆಯಲ್ಲಿ ಕೂಡಿಹಾಕಿಸಿದ್ದೇವೆ" ಎಂದನು.

"ಮರದ ಕುದುರೆ ಏನಾಯಿತು?" ಅಕ್ಮಾರ್ ಕಾತುರಸ್ವರದಿಂದ ಕೇಳಿದನು.

"ನನ್ನ ಸೇವಕರ ಸ್ವಾಧೀನದಲ್ಲಿದೆ" ಎಂದನು ಸುಲ್ತಾನ.

ಅಕ್ಮಾರನಿಗೆ ಕುದುರೆಯ ಕೀಲುಗಳು ಸರಿಯಾಗಿವೆಯೋ ಇಲ್ಲವೋ ಪರೀಕ್ಷೆ ಮಾಡಬೇಕೆನ್ನಿಸಿತು. ಬಳಿಕ ತನ್ನ ಮುಂದಿನ ಕಾರ್ಯಕ್ರಮವನ್ನು ನಿರ್ಧರಿಸಬಹುದು. ಆದುದರಿಂದ ಅವನು ಸುಲ್ತಾನನೊಂದಿಗೆ "ಮಹಾಪ್ರಭೂ, ಆ ಕುದುರೆಯನ್ನು ನಾನೊಮ್ಮೆ ನೋಡಬೇಕು. ಯಾಕೆಂದರೆ ವಿಚಿತ್ರವಾದ ಆ ಕೀಲುಕುದುರೆಗೂ ಈ ಕನ್ಯೆಯ ಬುದ್ಧಿಭ್ರಮಣೆಗೂ ಯಾವುದಾದರೂ ಸಂಬಂಧವಿರಬಹುದು" ಎಂದನು.

"ಅಗತ್ಯವಾಗಿ. ನನ್ನದೇನೂ ಅಭ್ಯಂತರವಿಲ್ಲ" ಎಂದು ಸುಲ್ತಾನನು ಅಕ್ಮಾರನನ್ನು ತನ್ನ ಸಂಗಡ ಕುದುರೆಯಿದ್ದ ಸ್ಥಳಕ್ಕೆ ಕರೆದುಕೊಂಡು ಹೋದನು. ಅಕ್ಮಾರನು ಕುದುರೆ

ಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿದನು. ಕುದುರೆಯ ಕೀಲುಗಳೆಲ್ಲ ನೆಟ್ಟಗಿವೆಯೆಂದು ಅವನಿಗೆ ಖಚಿತವಾಯಿತು.

"ಅಲ್ಲಾ ಕರುಣಿಸಲಿ. ನಾವು ಈಗ ರೋಗಿಯನ್ನು ಕಾಣಬೇಕು. ಆಕೆಯ ಬೇನೆಯನ್ನು ಗುಣಪಡಿಸಬಲ್ಲೆನೆಂಬ ಭರವಸೆ ಈಗ ನನಗಿದೆ'' ಎಂದ ಅಕ್ಮಾರ್.

ಇಬ್ಬರೂ ನೆಟ್ಟಗೆ ರಾಜಕುಮಾರಿ ನಹರ್ ಇದ್ದ ಕೋಣೆಗೆ ಹೋದರು. ಆಕೆ ಕೈ ಸುಮ್ಮನೆ ಬೀಸುತ್ತಿದ್ದಳು. ಗಲ್ಲಗಲ್ಲ ಬಡೆದುಕೊಳ್ಳುತ್ತಿದ್ದಳು. ಅರಿವೆ ಹರಿದುಕೊಳ್ಳುತ್ತಿದ್ದಳು. ಅಕ್ಮಾರ್ ಆಕೆಯನ್ನು ಕಂಡಕೂಡಲೇ ಅದೆಲ್ಲ ಬರಿ ನಟನೆಯೆಂದು ಗ್ರಹಿಸಿದನು. ಅವನು ಆಕೆಯನ್ನು ಸಮೀಪಿಸಿ "ಪ್ರಭುವಿನ ಸುಂದರಿ, ನಿನಗೆ ಶಾಂತಿಯುಂಟಾಗಲಿ'' ಎಂದನು. ಅವನ ಕಂಠಸ್ವರವನ್ನು ಕೇಳಿದಕೂಡಲೇ ರಾಜಕುಮಾರಿ ಬೆಚ್ಚಿಬಿದ್ದು ತನ್ನ ಪ್ರಿಯನನ್ನು ಗುರುತಿಸಿದಳು. ಆಕೆ ಆನಂದಪರವಶಳಾಗಿ ಕಿಟಾರನೆ ಕಿರಿಚಿ ಮೂರ್ಛಿತಳಾದಳು. ವೈದ್ಯನನ್ನು ಕಂಡಕೂಡಲೇ ಭೂತವು ಪರಾರಿಯಾಯಿತೆಂದು ಸುಲ್ತಾನನು ಭಾವಿಸಿದನು. ಆತನನ್ನು ಕೊಠಡಿಯಹೊರಗೆ ನಿಲ್ಲುವಂತೆ ಹೇಳಿ, ಅಕ್ಮಾರ್ ರಾಜಕುಮಾರಿಯ ಬಳಿಗೆ ಹೋಗಿ ಆಕೆಗೆ ಆರೈಕೆ ಮಾಡಿದನು. ಸ್ವಲ್ಪ ಸಮಯದನಂತರ ಆಕೆಗೆ ಪ್ರಜ್ಞೆ ಬಂತು. ತರುವಾಯ ಅವನು ರಹಸ್ಯವಾಗಿ ಆಕೆಯೊಂದಿಗೆ "ಪ್ರಿಯೇ, ಇನ್ನು ಸ್ವಲ್ಪ ಸಮಯ ಸಹನೆಯಿಂದಿದ್ದರೆ ನಾವು ಈ ಸುಲ್ತಾನನ ಸೆರೆಯಿಂದ





ಹೊರಬೀಳಬಹುದು. ನಿನಗೆ ಭೂತಹಿಡಿದಿದೆ ಯೆಂದು ಸುಲ್ತಾನನಿಗೆ ಹೇಳುತ್ತೇನೆ. ನೀನೂ ಸಹ ಅದೇ ರೀತಿ ವರ್ತಿಸಬೇಕು" ಎಂದನು. ನಹರ್ ಸರಿಯೆಂದು ಒಪ್ಪಿಕೊಂಡಳು.

ಅಕ್ಮಾರನು ಸುಲ್ತಾನನಬಳಿಗೆ ಬಂದು "ಈಕೆಗೆ ದೆವ್ವಹಿಡಿದಿದೆ. ಅದನ್ನು ನಾನು ಬಿಡಿಸಿರುವೆನು. ಈಗ ನೀವು ಹೋಗಿ ಆಕೆ ಯನ್ನು ಪ್ರೀತಿಯಿಂದ ಮಾತನಾಡಿಸಿ. ನೀವು ಆಕೆಗೆ ಏನೇನು ಕೊಡಲು ನಿರ್ಧರಿಸಿರುವಿರೋ ಅವುಗಳನ್ನು ಕೊಟ್ಟುಬಿಡಿ. ಎಲ್ಲಾ ನಿಮಗೆ ಅನುಕೂಲವಾಗಿ ನಡೆಯುತ್ತವೆ" ಎಂದ.

ಆಚ್ಚರಿಗೊಂಡ ಸುಲ್ತಾನನು ರಾಜಕುಮಾರಿ ನಹರಳನ್ನು ಸಮಿಾಪಿಸಿದನು. ಸುಲ್ತಾನನು ಬರುತ್ತಿರುವುದನ್ನು ಕಂಡು, ಆಕೆ ಎದ್ದು ನಿಂತು ವಿನಯದಿಂದ ಸಲಾಮು ಮಾಡಿದಳು. "ನನ್ನನ್ನು ನೋಡಲು ಬಂದಿರಾ? ಧನ್ಯಳಾದೆ" ಎಂದಳು.

ಆಕೆಯ ಬಾಯಿಂದ ಹೊರಟ ಅಮೃತ ವಾಣಿಯನ್ನು ಕೇಳಿ ಸುಲ್ತಾನನ ಆನಂದಕ್ಕೆ ಪಾರವೇ ಇಲ್ಲ. ಆತನು ಅಲ್ಲಿದ್ದ ದಾಸಿಯ ರನ್ನೂ, ಖೋಜ್ಜಾಗಳನ್ನೂ ಕರೆದು "ನೀವು ಈಕೆಯನ್ನು ಸ್ನಾನಗೃಹಕ್ಕೆ ಕರೆದುಕೊಂಡು ಹೋಗಿ ಪರಿಮಳ ದ್ರವ್ಯಗಳಿಂದ ಸ್ನಾನ ಮಾಡಿಸಿ, ಪೀತಾಂಬರವನ್ನು ಉಡಿಸಿ, ಆಭರಣ ಗಳನ್ನು ತೊಡಿಸಿರಿ" ಎಂದು ಆಜ್ಞಾಪಿಸಿದನು. ಅವರು ಆಕೆಗೆ ಸ್ನಾನಮಾಡಿಸಿ, ರಾಜೋಚಿತ ವಾದ ವಸ್ತ್ರಗಳನ್ನು ಉಡಿಸಿ, ಕೊರಳಿಗೆ ರತ್ನ ಹಾರ ಹಾಕಿದರು. ಆಕೆ ಹುಣ್ಣಿಮೆಯ ಚಂದ್ರ ನಂತೆ ಶೋಭಿಸುತ್ತಾ ಸುಲ್ತಾನನಬಳಿಗೆ ಮೆಲ್ಲ ನಡಿಯಿಡುತ್ತಾ ಬಂದಳು.

ಸುಲ್ತಾನನು ಅಕ್ಮಾರನಕಡೆ ತಿರುಗಿ "ನನ ಗಿಷ್ಟು ಆನಂದವನ್ನುಂಟು ಮಾಡಿದ ನೀನು ಸಾಮಾನ್ಯ ವೈದ್ಯನಲ್ಲ. ನಿನ್ನ ಋಣ ಹೇಗೆ ತೀರಿಸಲಿ?" ಎಂದನು.

"ಮಹಾಪ್ರಭು, ಚಿಕಿತ್ಸೆ ಇನ್ನಷ್ಟು ಉಳಿದಿದೆ. ತಮ್ಮ ಅಪ್ಪಣೆಯಾದರೆ ಅದನ್ನೂ ಮುಗಿಸಿಬಿಡುತ್ತೇನೆ. ಆ ಕುದುರೆಯಲ್ಲೇ ದೆವ್ವದ ರಹಸ್ಯವಿದೆ. ನನಗೆ ಮೊದಲೇ ಅನು ಮಾನವಿತ್ತು. ಆ ದೆವ್ವಕ್ಕೆ ಮಾರಣಹೋಮ ಮಾಡಲು ನಾವು ಆ ಕುದುರೆ ಮೊದಲು ನಿಮಗೆ ಕಾಣಿಸಿದ ಸ್ಥಳಕ್ಕೆ ಕುದುರೆ ಮತ್ತು

ರಾಜಕುಮಾರಿಯೊಂದಿಗೆ ಹೋಗಬೇಕು. ಆ ದೆವ್ವವನ್ನು ಒಡಿಸದಿದ್ದ ಪಕ್ಷಕ್ಕೆ ಪ್ರತಿ ತಿಂಗಳೂ ಅದು ರಾಜಕುಮಾರಿಯನ್ನು ಪೀಡಿಸುತ್ತಿರುತ್ತದೆ. ಪ್ರತಿಸಾರಿ ನಾನು ಬಂದು ಚಿಕಿತ್ಸೆ ನಡೆಸ ಬೇಕಾಗುತ್ತಿದೆ. ಅಂತಹ ತೊಂದರೆಯಿಲ್ಲದಂತೆ ಮಾಡುತ್ತೇನೆ" ಎಂದ ಅಕ್ಮಾರ್.

ಸುಲ್ತಾನನು ಇದಕ್ಕೆ ಸಮ್ಮತಿಸಿದನು. ಸುಲ್ತಾನನೂ, ಆತನ ಪರಿವಾರವೂ, ಅಕ್ಮಾರ್, ನಹರ್ ನಗರದಾಚೆಯಿದ್ದ ಮೈದಾನಕ್ಕೆ ಕುದುರೆಯೊಂದಿಗೆ ಹೊರಟರು. ರಾಜಕುಮಾರನು ಮರದಕುದುರೆಯನ್ನು ಒಂದುಕಡೆಯಿಡಿಸಿ ಅದರಮೇಲೆ ರಾಜಕುಮಾರಿಯನ್ನು ಹತ್ತಿಸಿದನು. ಸುಲ್ತಾನ ಮತ್ತು ಆತನ ಪರಿವಾರವನ್ನು ತುಸದೂರ ನಿಲ್ಲಿಸಿ, ಸುಲ್ತಾನನೊಂದಿಗೆ ಹೀಗೆಂದನು. "ಮಹಾಪ್ರಭು, ಈ ಕುದುರೆಯಲ್ಲಿರುವ ಭೂತವನ್ನು ನಿಮಗೆ ಪ್ರತ್ಯಕ್ಷವಾಗಿ ತೋರಿಸುತ್ತೇನೆ. ನಾನು ಆ ಕುದುರೆಯಮೇಲೇರಿ ಮಂತ್ರವನ್ನು ಉಚ್ಚರಿಸಿದಕೂಡಲೇ ಪ್ರಾಣವಿಲ್ಲದ ಕುದುರೆ ಮೆಲ್ಲ ನಡಿಯಿಡುತ್ತ ನಿಮ್ಮಬಳಿಗೆ ಬರುತ್ತದೆ. ತರುವಾಯ ನೀವು ಆ ಕನ್ಯೆಯನ್ನು ಕುದುರೆಯ ಮೇಲಿಂದ ಇಳಿಸಿಕೊಂಡು ಮದುವೆಯಾಗಬಹುದು. ಇನ್ನೆಂದಿಗೂ ದೆವ್ವ ಆಕೆಯನ್ನು ಪೀಡಿಸುವುದಿಲ್ಲ."

ಸುಲ್ತಾನನಿಗೆ ಸಖೇದಾಶ್ಚರ್ಯವಾಯಿತು. ಜೀವವಿಲ್ಲದ ಅಶ್ವ ನಡೆದುಕೊಂಡು ಬರುವ ಚೋದ್ಯವನ್ನು ನೋಡಲು ಆತನು ಕುತೂಹಲ



ಗೊಂಡನು. ಅಕ್ಮಾರನು ಕುದುರೆಯಬಳಿಗೆ ಹೋಗಿ, ಅದನ್ನು ಹತ್ತಿ ಕೀಲನ್ನು ಒತ್ತಿದನು. ಕುದುರೆ ಆಕಾಶಕ್ಕೆ ಹಾರಿ ಎವೆಯಿಕ್ಕುವಷ್ಟರಲ್ಲಿ ಅದೃಶ್ಯವಾಯಿತು.

ಅಲ್ಲಿಗೆ ತನ್ನ ಆಟ ಮುಗಿಯಿತೆಂದು ಸುಲ್ತಾನನಿಗೆ ತಿಳಿಯಲಿಲ್ಲ. ಕುದುರೆಯ ಬರುವಿಕೆಯನ್ನು ಎದುರು ನೋಡುತ್ತ ಆತನು ಅಂದೆಲ್ಲಾ ಆ ಮೈದಾನದಲ್ಲೇ ಉಳಿದನು. ಅರಮನೆಗೆ ಹೋದನಂತರ ಸಹ ಕುದುರೆ ಈಗ ಬರಬಹುದು, ಆಗ ಬರಬಹುದು ಎಂದು ನಿರೀಕ್ಷಿಸುತ್ತಿದ್ದನು. ತನ್ನ ಆಶೆ ನಿರಾಶೆಯೆಂದು ತಿಳಿದನಂತರ ಕತ್ತಲು ಕೋಣೆಯಲ್ಲಿ ಕೂಡಿಹಾಕಿದ್ದ ಸಿದ್ಧನನ್ನು ತನ್ನೆದುರಿಗೆ ಬರಮಾಡಿ "ಎಲವೋ, ನೀಚ, ಆ ಕುದುರೆಯಲ್ಲಿ ದೆವ್ವವಿರುವ ವಿಷಯ

ವೇಕೆ ಹೇಳಲಿಲ್ಲ? ಆ ಹುಡುಗಿಗೆ ಚಿಕಿತ್ಸೆ ಮಾಡಿದ ವೈದ್ಯನನ್ನೂ, ಆ ಹುಡುಗಿಯನ್ನೂ ಸಹ ದೆವ್ವ ಹಾರಿಸಿಕೊಂಡುಹೋಯಿತು. ಪಾಪ, ಅವರೇನಾದರೋ ಏನೋ? ಎಲ್ಲಾ ಹಾಳಾಯಿತು. ಇದಕ್ಕೆಲ್ಲಾ ಕಾರಣ ನೀನೇ! ನಿನ್ನ ತಲೆ ತೆಗೆಸುತ್ತೇನೆ." ಎಂದನು.

ಆತನು ಕೈ ಎತ್ತಿದಕೂಡಲೇ ಭಟನೊಬ್ಬನು ಬಂದು ಸಿದ್ಧನ ತಲೆ ಹಾರಿಸಿದನು.

ಇತ್ತ ರಾಜಕುಮಾರ ಅಕ್ಮಾರ್ ತನ್ನ ಪ್ರಿಯಳೊಂದಿಗೆ ಸುರಕ್ಷಿತವಾಗಿ ತನ್ನ ದೇಶ ವನ್ನು ಸೇರಿಕೊಂಡನು. ಅವನು ಈಸಾರಿ ತನ್ನ ಪ್ರಿಯಳನ್ನು ಉದ್ಯಾನವನದಲ್ಲಿ ಇಳಿಸುವ ಗೋಜಿಗೆ ಹೋಗಲಿಲ್ಲ. ನೆಟ್ಟಗೆ ತಮ್ಮ ಅರ ಮನೆಯಮೇಲಿನ ಮಾಡಿನಮೇಲೆ ಇಳಿಸಿದನು. ಅಲ್ಲಿಂದ ಆತನು ಪ್ರಿಯಳೊಂದಿಗೆ ಕೆಳಗಿಳಿದು ಪಡಸಾಲೆಗೆ ಬರಲು ಅಲ್ಲಿ ತನ್ನ ತಂದೆ ತಾಯಿ ಮತ್ತು ಸಹೋದರಿಯರು ಚಿಂತಾ ಮಗ್ನರಾಗಿ ಕುಳಿತುಕೊಂಡಿರುವುದನ್ನು ಕಂಡನು. "ಅಮ್ಮಾ, ಅಪ್ಪಾ" ಎಂಬ ಕುಮಾರನ ದನಿಯನ್ನು ಕೇಳಿದಾಗಲೇ ಅವ ರಿಗೆ ಹೊಸ ಜೀವವು ಬಂದಂತಾಯಿತು.

ರಾಜಕುಮಾರ ಅಕ್ಮಾರ್ ಮತ್ತು ಸನಾ ರಾಜಕುಮಾರಿ ನಹರ್‌ಗೆ ವೈಭವದಿಂದ ವಿವಾಹವಾಯಿತು. ಮೆರವಣಿಗೆ, ಉತ್ಸವ ಗಳು, ವಿನೋದಗಳು ಒಂದು ತಿಂಗಳ ತನಕ ಸಾಗಿದುವು. ಆ ಸಮಯದಲ್ಲಿ ಅಕ್ಮಾರ್ ನಡೆದ ಯಾವತ್ತೂ ವಿಷಯವನ್ನು ಪತ್ರದ ಮೂಲಕ ತನ್ನ ಮಾವನಿಗೆ ತಿಳಿಯ ಪಡಿಸಿ, ಅದರೊಂದಿಗೆ ಸನಾ ರಾಜನಿಗೂ, ಆತನ ಕುಟುಂಬಕ್ಕೂ ಯಥೇಚ್ಛವಾದ ಬಹುಮಾನ ಗಳನ್ನು ದೂತರೊಂದಿಗೆ ಕಳುಹಿಸಿ ಕೊಟ್ಟನು.

ಸಾಬೂರ್ ಚಕ್ರವರ್ತಿ ಮರದಕುದುರೆ ಯನ್ನು ಚೂರುಚೂರು ಮಾಡಿಸಿ, ಅದರ ಯಂತ್ರವನ್ನು ನಾಶಪಡಿಸುವ ತನಕ ಆತನ ಮನಸ್ಸಿಗೆ ನೆಮ್ಮದಿಯಿರಲಿಲ್ಲ. ತನ್ನ ಮಾವ ಮತ್ತು ತಂದೆಯ ಮರಣಾನಂತರ ಅಕ್ಮಾರ್ ಎರಡು ದೇಶಗಳಿಗೂ ರಾಜನಾಗಿ ಸುಖವಾಗಿ ರಾಜ್ಯಭಾರಮಾಡುತ್ತಿದ್ದನು. [ಮುಗಿಯಿತು]






# ಅತಿಯಾಸೆ ಗತಿಗೆಡಿಸಿತು!

ಬಾಗದಾದ್ ನಗರದ ಖಲೀಫ ಹರೂನ್ ಅಲ್ ರಷೀದ್ ಒಂದು ದಿನ ಮಾರುವೇಷದಲ್ಲಿ ನಗರ ಸಂಚಾರಕ್ಕೆ ಹೊರಟನು. ಅವನ ಸಂಗಡ ಮಂತ್ರಿ ಜಾಫರ್, ಅಂಗರಕ್ಷಕ ಮಸ್ರೂರ್ ಸಹ ಹೊರಟಿದ್ದರು. ಅವರು ಟೈಗ್ರಿಸ್ ನದಿಯಮೇಲಿನ ಕಲ್ಲುಸೇತುವೆಯ ಬಳಿಗೆ ಬರಲು, ಅಲ್ಲೊಬ್ಬ ಅಂಧಭಿಕ್ಷುಕನು ದಾರಿಹೋಕರಮುಂದೆ ಕೈಯೊಡ್ಡುತ್ತಿದ್ದನು.

ಆ ಮುದುಕನನ್ನು ಕಂಡು ಖಲೀಫಾಗೆ ತುಂಬಾ ಮರುಕವಾಯಿತು. ಆದುದರಿಂದ ಭಿಕ್ಷುಕನ ಕೈಗೆ ಒಂದು ಚಿನ್ನದ ನಾಣ್ಯವನ್ನು ಕೊಟ್ಟನು. ಕೂಡಲೇ ಆ ವೃದ್ಧನು ಖಲೀಫಾನ ಕೈಯನ್ನು ಬಿಗಿಯಾಗಿ ಹಿಡಿದು, "ಸ್ವಾಮಿ, ಅಲ್ಲಾ ನಿಮ್ಮನ್ನು ಕಾಪಾಡಲಿ. ನೀವು ನನ್ನ ಬೆನ್ನಿನಮೇಲೆ ಒಂದೇಟು ಕೊಟ್ಟು ಹೋಗಬೇಕು" ಎಂದು ಅವರ ಕೈಯನ್ನು ಬಿಟ್ಟು ಅಂಗಿಯನ್ನು ಹಿಡಿದುಕೊಂಡನು. ಖಲೀಫಾ ಆಶ್ಚರ್ಯದಿಂದ "ಅಯ್ಯಾ, ಕೊಟ್ಟ ಕೈಯಲ್ಲಿ ಹೊಡೆಯುವುದುಂಟೆ? ಅದರಲ್ಲೂ ನಿನ್ನಂತಹ ವೃದ್ಧನನ್ನು ಹೊಡೆದರೆ ಅಲ್ಲಾ ನನ್ನನ್ನು ಕ್ಷಮಿಸುತ್ತಾನೆಯೇ?" ಎಂದನು.

ಆದರೆ ಕುರುಡನು ಅವನನ್ನು ಬಿಡಲಿಲ್ಲ. "ಸ್ವಾಮಿ, ಪೆಟ್ಟುಪಡೆಯದೆ ತಮ್ಮಿಂದ ಧರ್ಮದಾನಗಳನ್ನು ಸ್ವೀಕರಿಸಲಾರೆ. ನನ್ನ ಯಾವತ್ತೂ ವಿಷಯ ತಿಳಿದರೆ ನೀವು ನನ್ನ ಕೋರಿಕೆಯನ್ನು ಖಂಡಿತ ನೆರವೇರಿಸುವಿರಿ. ದಯವಿಟ್ಟು ಒಂದು ಪೆಟ್ಟು ಕೊಟ್ಟು ಹೋಗಿ" ಎಂದು ವೃದ್ಧ ಮತ್ತೊಮ್ಮೆ ಕೇಳಿಕೊಂಡನು.

ದಾರಿಯಲ್ಲಿ ಹೋಗುವವರು ನೋಡಿ ನಕ್ಕಾರೆಂಬ ಸಂಕೋಚ ಖಲೀಫನಿಗೆ. ಆದರೆ ಮುದುಕ ಬಿಡುವಂತಿಲ್ಲ. ಕೊನೆಗೆ ಖಲೀಫಾ ಆ ಮುದುಕನ ಬೆನ್ನಿನಮೇಲೆ ಮೆಲ್ಲನೊಂದು ಪೆಟ್ಟು ಕೊಟ್ಟುಮುಂದೆ ನಡೆದನು. ಅಂಧನು ಆಶೀರ್ವದಿಸುವುದೂ ಅವನಿಗೆ ಕೇಳಿಸಿತು.

ಖಲೀಫಾ ಜಾಫರನೊಂದಿಗೆ "ಈ ವೃದ್ಧನ ಕಥೆ ಕೇಳಬೇಕೆಂದು ನನಗೆ ತುಂಬಾ ಕುತೂ

ಎ. ಭಾಸ್ಕರರೈ



ಹಲವಾಗಿದೆ. ನೀನು ಅವನಬಳಿಗೆ ಹೋಗಿ ನಾಳೆ ಮಧ್ಯಾಹ್ನ ಅರಮನೆಗೆ ಬರಬೇಕೆಂದು ನನ್ನ ಆಜ್ಞೆಯನ್ನು ಅವನಿಗೆ ತಿಳಿಸು" ಎಂದನು. ಅದೇಪ್ರಕಾರ ಜಾಫರ್ ಹೋಗಿ ಖಲೀಫರ ಸಂದೇಶವನ್ನು ಮುಟ್ಟಿಸಿದನು.

ಮಾರನೇಯದಿನ ಮಧ್ಯಾಹ್ನ ಪ್ರಾರ್ಥನೆ ಮುಗಿಸಿದನಂತರ ಖಲೀಫಾ ದಿವಾಣಖಾನೆಗೆ ಬಂದಕೂಡಲೇ ಜಾಫರ್ ಆಂಧ ವೃದ್ಧನನ್ನು ಅವರಮುಂದೆ ತಂದು ನಿಲ್ಲಿಸಿದನು. ಖಲೀಫನು ಆಜ್ಞೆಮಾಡಲು ವೃದ್ಧನು ಈ ರೀತಿ ತನ್ನ ಕಥೆಯನ್ನು ಹೇಳಲಾರಂಭಿಸಿದನು:

"ನನ್ನ ಹೆಸರು ಬಾಬಾಅಬ್ದುಲ್ಲಾ. ನಾನು ಬಾಲ್ಯದಿಂದ ಒಂಟೆಗಳನ್ನು ನಡೆಯಿಸಿಕೊಂಡು ಜೀವಿಸುತ್ತಿದ್ದೆ. ನನ್ನ ಕಷ್ಟಜೀವಿತದ ಫಲವಾಗಿ ನಾನು ಎಂಬತ್ತು ಒಂಟೆಗಳ ಒಡೆಯನಾದೆ. ಅವುಗಳನ್ನು ವರ್ತಕರಿಗೂ, ಯಾತ್ರಿಕರಿಗೂ ಬಾಡಿಗೆಗೆ ಕೊಟ್ಟು ಯಥೇಚ್ಛವಾಗಿ ಹಣ ಗಳಿಸಿದೆ. ನನ್ನ ಜೊತೆಗಾರರೆಲ್ಲರಿಗಿಂತಲೂ ನಾನು ಹೆಚ್ಚು ಧನಿಕನಾಗಬೇಕೆಂದು ಕನಸುಕಾಣುತ್ತಿದ್ದೆ.

ಒಂದುಸಾರಿ ನಾನು ಇಂಡಿಯಾದೇಶಕ್ಕೆ ರವಾನಿಸುತ್ತಿದ್ದ ಸರಕನ್ನು ಬಸ್ರಾರೇವಿಗೆ ತಲುಪಿಸಬೇಕಾಯಿತು. ಬಸ್ರಾದಿಂದ ನಾನು ಒಂಟೆಗಳನ್ನು ಹಿಂದಕ್ಕೆ ನಡೆಸಿಕೊಂಡು ಬರುತ್ತಿರಲು ದಾರಿಯಲ್ಲಿ ಒಂದು ತೋಟ ಕಾಣಿಸಿತು. ಅಲ್ಲಿ ಒಂಟೆಗಳಿಗೆ ನೀರು ಕುಡಿಯಿಸಿ ನಾನು ಊಟ ಮಾಡಲು ಕುಳಿತುಕೊಂಡೆ. ಆ ಸಮಯಕ್ಕೆ ಒಬ್ಬ ಫಕೀರನು ನನ್ನಬಳಿಗೆ ಬಂದನು. ಅಲ್ಲಿನ ಆಚಾರದಪ್ರಕಾರ ನಾನು ನನ್ನ ಆಹಾರವನ್ನು ಹಂಚಿಕೊಂಡು ಊಟಮಾಡಿ ಮುಗಿಸಿ, ಹಾಗೇ ಹರಟೆ ಹೊಡೆಯುತ್ತಾ ಕುಳಿತಿದ್ದೆವು. ಮಾತಿನ ಸಂದರ್ಭದಲ್ಲಿ ನಾನು ಕಾಣುತ್ತಿದ್ದ ಕನಸನ್ನು ಕುರಿತು ಫಕೀರನೊಂದಿಗೆ ಹೇಳಿದೆ. ಆತನು ನಕ್ಕು "ಹುಚ್ಚ, ಅದೃಷ್ಟಕೂಡಿಬಂದರೆ ಒಂದು ಕ್ಷಣದಲ್ಲಿ ನವನಿಧಿಗಳೇ ಸಿಗುವಾಗ ನೀನು ಕನಸುಕಾಣುವುದು ಹುಂಬತನವಲ್ಲವೇ? ಭೂಮಿಯಲ್ಲಿ ಅಡಗಿರುವ ನಿಧಿಗಳನ್ನು ಕುರಿತು ನೀನು ಕೇಳಿಲ್ಲವೇ? ನಾನಿಂದು ನಿನಗೆ ಕಾಣಿಸಿದುದು ನಿನ್ನ ಅದೃಷ್ಟವೆಂತಲೇ ಭಾವಿಸು. ನನ್ನೊಂದಿಗೆ ಬಾ" ಎಂದನು. ನಾನು ಆನಂದಿಸಿ, ಫಕೀರನ ಸಂಗಡ

ಹೊರಟೆನು. ಒಂದುಗಂಟೆ ಹೊತ್ತು ನಡೆದ ನಂತರ ನಾವೊಂದು ಇಕ್ಕಟ್ಟಾದ ಕಣಿವೆಯನ್ನು ಸೇರಿಕೊಂಡೆವು. ಕಣಿವೆಯ ಒಂದುಕಡೆ ಎತ್ತರವಾದ ಬೆಟ್ಟ ನಿಟಾರನೆ ನಿಂತಿತ್ತು.

"ಇಲ್ಲಿ ನಿನ್ನ ಒಂಟೆಗಳನ್ನು ಮಲಗಿಸಿ ಬಾ. ಅವುಗಳಮೇಲೆ ಹಣದ ಮೂಟೆಗಳನ್ನು ಹೇರಿಸೋಣ" ಎಂದು ಫಕೀರನು ಹೇಳಿದನು. ನಾನು ಒಂಟೆಗಳನ್ನು ಸಿದ್ಧಪಡಿಸಿ ಬರುವಷ್ಟರಲ್ಲಿ ಫಕೀರನು ಬೆಟ್ಟದ ತಪ್ಪಲಿನಲ್ಲಿದ್ದ ದರಳೆಯನ್ನು ಕೂಡಿಸಿ ಉರಿ ಹಾಕಿದನು. ಆ ಬೆಂಕಿಯಲ್ಲಿ ಯಾವುದೋ ಚೂರ್ಣವನ್ನು ಚೆಲ್ಲುತ್ತ, ಏನೋ ಮಂತ್ರಗಳನ್ನು ಹೇಳುತ್ತಿದ್ದನು. ಹೊಗೆ ಚದರಿದನಂತರ ಬೆಟ್ಟದ ಒಂದು ಬಂಡೆ ಸೀಳಿ ಒಳಗಿದ್ದ ಗುಹೆ ಕಾಣಿಸಿತು.

ಆ ಗವಿಯಲ್ಲಿ ಚಿನ್ನದ ನಾಣ್ಯಗಳೂ, ರತ್ನ ರಾಶಿಗಳೂ ಇದ್ದುವು. ನಾನು ಆತುರದಿಂದ ಚಿನ್ನದ ನಾಣ್ಯಗಳಿಗೆ ಕೈಹಾಕಿ ಚೀಲದಲ್ಲಿ ತುಂಬಿಸ ತೊಡಗಿದೆ. ಆಗ ಫಕೀರನು "ಎಲವೋ ಮತಿಗೇಡಿ, ನಿನ್ನ ಒಂಟೆಗಳು ಎಷ್ಟು ಬಂಗಾರ ತಾನೇ ಹೊರಬಲ್ಲುವು? ಅದರಹಿಂದೆ ಇರುವ ರತ್ನ ರಾಶಿಯನ್ನು ನೋಡು. ಅದು ಬಂಗಾರಕ್ಕಿಂತಲೂ ನೂರರಷ್ಟುಭಾರ ಕಡಿಮೆ, ಸಾವಿರದಷ್ಟು ಬೆಲೆ ಹೆಚ್ಚು; ಆದುದರಿಂದ ರತ್ನಗಳನ್ನು ಚೀಲಗಳಲ್ಲಿ ತುಂಬಿಸಿಕೊ" ಎಂದನು.

ನನಗೆ ಆಗ ಜ್ಞಾನೋದಯವಾಯಿತು. ನಾನು ರತ್ನಗಳನ್ನು ಚೀಲಗಳ ತುಂಬಾ ತುಂಬಿ ಒಂಟೆಗಳಮೇಲೆ ಹೊರಿಸುತ್ತಿದ್ದೆ. ನನ್ನ







ಕೆಲಸ ಪೂರ್ತಿಯಾದಕೂಡಲೇ ಆತನು "ಇನ್ನು ಗವಿಯನ್ನು ಮುಚ್ಚಿ ಹೊರಡಬಹುದಷ್ಟೇ?" ಎಂದು ಹೇಳಿ ಒಂದು ಚಿನ್ನದ ಜಾಡಿಯಲ್ಲಿ ಕೈ ಹಾಕಿ ಅದರಿಂದ ಒಂದು ಭರಣಿಯನ್ನು ತೆಗೆದುಕೊಂಡನು.

ನನ್ನ ಹತ್ತಿರ ಎಂಬತ್ತು ಸಾವಿರ ಒಂಟೆಗಳಿದ್ದಿದ್ದರೆ ಎಷ್ಟು ಸೊಗಸಾಗಿರುತಿತ್ತು! ಕೇವಲ ಎಂಬತ್ತು ಒಂಟೆಗಳುಮಾತ್ರವಿದ್ದುವಲ್ಲಾ, ಎಂದು ನಾನು ಚಿಂತಿಸುತ್ತಿದ್ದೆ. ಆಗ ಆ ಭರಣಿಯನ್ನು ಫಕೀರನು ತನ್ನ ಕಿಸೆಗೆ ಸೇರಿಸುವುದು ನನ್ನ ಕಣ್ಣಿಗೆ ಬಿತ್ತು. "ಇದರಲ್ಲಿ ಕಣ್ಣಿಗೆ ಹಚ್ಚಿಕೊಳ್ಳುವ ಅಂಜನದ ಹೊರತು ಮತ್ತೇನೂ ಇಲ್ಲ" ಎಂದನು ಫಕೀರ. ಜಾಡಿಯಿಂದ ನಾನೂ ಒಂದು ಭರಣಿ ತೆಗೆದುಕೊಳ್ಳಲು ಯತ್ನಿಸಲು, ಅವನು ನನ್ನನ್ನು ತಡೆದು "ಇಂದಿಗೆ ಇಷ್ಟು ಸಾಕು" ಎಂದನು.

ನಾವು ಹೊರಗೆ ಬಂದನಂತರ ಫಕೀರನು ಏನೋ ಮಂತ್ರ ಹೇಳಲು, ಕಲ್ಲುಬಂಡೆ ಎಂದಿನಂತೆ ಮುಚ್ಚಿಕೊಂಡಿತು. ಬಂಡೆ ಸೀಳಿದ ಸ್ಥಳದ ಗುರುತು ಸಹ ಕಾಣಿಸಲಿಲ್ಲ.

"ನಾವು ನಮ್ಮ ಸ್ಥಳಕ್ಕೆ ಹಿಂತಿರುಗಿದ ಕೂಡಲೇ ಈ ರತ್ನರಾಶಿಯನ್ನು ಸಮಭಾಗವಾಗಿ ಹಂಚಿಕೊಳ್ಳೋಣ" ಎಂದ ಫಕೀರ. ನಾನು ಹೀಗೆ ಯೋಚಿಸಿದೆ: "ಆತನಿಗೆ ಅರ್ಧಭಾಗ ಏಕೆ ಕೊಡಬೇಕು? ನನ್ನ ಒಂಟೆಗಳಿಲ್ಲದಿದ್ದರೆ ಆತನಿಗೆ ಈ ರತ್ನರಾಶಿಯನ್ನು ಪಡೆಯಲು ಸಾಧ್ಯವಾಗುತ್ತಿರಲಿಲ್ಲ. ನಾನು ಆತನೊಂದಿಗೆ ಇಲ್ಲದಿದ್ದರೆ ಆ ಗುಹೆಯ ದ್ವಾರ ತೆರೆದುಕೊಳ್ಳುತಿತ್ತೋ ಇಲ್ಲವೋ ಯಾರು ಬಲ್ಲರು? ನಾನು ಬೆವರು ಸುರಿಸಿ ಪ್ರಯಾಸದಿಂದ ಆ ಚೀಲಗಳನ್ನೆಲ್ಲಾ ಒಂಟೆಗಳಮೇಲೆ ಹೊರಿಸಿದೆ. ಆಗ ಆತನು ಮಾಡುತ್ತಿದ್ದುದಾದರೂ ಏನು—ಸುಮ್ಮನೆ ನಿಂತು ನಗುತ್ತಿದ್ದ! ಬೇರೇನೂ ಕೆಲಸ ಮಾಡಲಿಲ್ಲ!!

ನಾವು ಹೊರಟ ಸ್ಥಳವನ್ನು ಸೇರಿದ ಕೂಡಲೇ "ಅಯ್ಯಾ ಫಕೀರನೇ, ಸನ್ಯಾಸಿಯಂತಿರುವ ನಿನಗೆ ನಲವತ್ತು ಒಂಟೆಗಳ ಮೇಲಿರುವ ರತ್ನಗಳೇಕೆ? ರತ್ನರಾಶಿಯಿದ್ದ ಸ್ಥಳ ತೋರಿಸಿದ ಮಾತ್ರಕ್ಕೆ ನಿನಗೆ ಅಷ್ಟು ಭಾಗ ಕೊಡಬೇಕೇ?" ಎಂದು ಕೇಳಿದೆನು. ಆತನು ಆಗ್ರಹಕೊಳ್ಳದೆ "ಹುಚ್ಚನೇ,



ನಾನು ಇದನ್ನು ಬಡಬಗ್ಗರಿಗೆ ಹಂಚುತ್ತೇನೆ. ನಿನಗೊಂದು ವಿಷಯ ಹೇಳುತ್ತೇನೆ ಕೇಳು— ಪ್ರತಿ ಒಂಟೆಯ ಮೇಲೆ ಹೇರಿಸಿರುವ ರತ್ನಗಳು ಒಬ್ಬೊಬ್ಬ ರಾಜನ ಬೊಕ್ಕಸವನ್ನೇ ಮಿಾರಿರುವುದು. ನೀನು ಈಗ ನಲವತ್ತು ಒಂಟೆಗಳನ್ನು ತೆಗೆದುಕೊಂಡು ಹೋದರೂ ನಿನ್ನಷ್ಟು ಸಿರಿವಂತನು ಬಾಗದಾದಿನಲ್ಲಿ ಬೇರೊಬ್ಬನಿರಲಾರನು. ಸುಮ್ಮನೆ ದುರಾಸೆಗೆ ಗುರಿಯಾಗಬೇಡ" ಎಂದು ಬುದ್ಧಿಹೇಳಿದನು.

ಆತನ ಮಾತು ಸತ್ಯವೆಂದು ತಿಳಿದಿದ್ದರೂ ಸಹ ನಾನು ಹೀಗೆಂದೆ: "ಆದರೆ ಒಂಟೆಗಳನ್ನು ನಡೆಸಿಕೊಂಡು ಹೋಗುವುದು ತುಂಬಾ ಕಷ್ಟಕರವಾದ ಕೆಲಸ. ಅಭ್ಯಾಸವಿಲ್ಲದ ನೀನು ನಲವತ್ತು ಒಂಟೆಗಳನ್ನು ನಡೆಸಿಕೊಂಡು ಹೋಗಲಾರೆ. ಅವುಗಳಷ್ಟೂ ನಿನಗೆ ದಕ್ಕುವುವೋ ಇಲ್ಲವೋ ನನಗೆ ಸಂದೇಹವಾಗಿದೆ. ನಿನಗೆ ರತ್ನರಾಸಿಯಿರುವ ಸ್ಥಳ ತಿಳಿದಿದೆ. ಬೇಕೆಂದಾಗ ಬೇಕಾದಷ್ಟು ರತ್ನಗಳನ್ನು ತೆಗೆದುಕೊಂಡು ಹೋಗಬಹುದಲ್ಲಾ! ಈಗ ಕೆಲವೇ ಒಂಟೆಗಳನ್ನು ತೆಗೆದುಕೊಂಡು ಹೋದರಾಯಿತು. ಅದು ಉತ್ತಮವಾದ ಕೆಲಸ. ಏನು ಹೇಳುವೆ?"

"ಸರಿ, ಅದೂ ನಿಜವೇ ಅನ್ನು. ನನಗೆ ಇಪ್ಪತ್ತು ಒಂಟೆಗಳನ್ನು ಕೊಡು, ಸಾಕು" ಎಂದ ಫಕೀರ. ಆತನಷ್ಟು ಸುಲಭವಾಗಿ ಒಪ್ಪಿದುದು ನನಗೆ ಅತೀವ ಸಂತೋಷವಾಯಿತು. ಆತನಿಗೆ ಇಪ್ಪತ್ತು ಒಂಟೆಗಳನ್ನು ಕೊಟ್ಟೆ.



ಆತನು ಅವುಗಳೊಂದಿಗೆ ಬಸ್ರಾನಗರದ ದಾರಿ ಹಿಡಿದನು. ನಾನು ಬಾಗದಾದಿನಕಡೆ ನಡೆದೆ.

ಆದರೆ ಕೊಂಚ ದೂರ ಹೋದನಂತರ ನನ್ನನ್ನು ದುರಾಸೆ ಕಿತ್ತುತಿನ್ನಲಾರಂಭಿಸಿತು. ಫಕೀರನು ತೆಗೆದುಕೊಂಡು ಹೋಗುತ್ತಿದ್ದ ಇಪ್ಪತ್ತು ಒಂಟೆಗಳಮೇಲಿದ್ದ ರತ್ನಗಳೊಂದಿಗೆ ನನ್ನ ಪ್ರಾಣ ಸಹ ಹೋಗುತ್ತಿರುವಂತೆ ಭಾಸವಾಯಿತು. ಕೂಡಲೇ ನಾನು ನನ್ನ ಒಂಟೆಗಳನ್ನು ಒಂದುಕಡೆ ನಿಲ್ಲಿಸಿ, ಫಕೀರನನ್ನು ಕೂಗುತ್ತಾ, ಆತನತ್ತ ಓಡಿದೆ. ನನ್ನ ದನಿ ಕೇಳಿ ಆತನು ಪಟಕ್ಕನೆ ನಿಂತುಬಿಟ್ಟನು.

ನಾನು ಫಕೀರನಿಗೆ ಏನೇನೋ ಸಬೂಬು ಹೇಳಿ, ಕಣ್ಣೀರು ಸುರಿಸುತ್ತಾ ಇಪ್ಪತ್ತು ಒಂಟೆಗಳಮೇಲಿರುವ ರತ್ನಗಳನ್ನು ನನಗೇ ಕೊಟ್ಟು

ಹೋಗುವಂತೆ ಬೇಡಿಕೊಳ್ಳಲು, ಉದಾರ ಹೃದಯದಿಂದ ಆತನು ಒಪ್ಪಿಕೊಂಡನು. ನಾನು ಸಂತೋಷದಿಂದ ಆತನನ್ನು ಬಿಗಿದಪ್ಪಿಕೊಂಡೆ. ಆಗ ಫಕೀರನು "ತಮ್ಮಾ, ಅಲ್ಲಾ ಅನುಗ್ರಹಿಸಿಕೊಟ್ಟ ಈ ಹಣವನ್ನು ವಿವೇಚನೆಯಿಂದ ಖರ್ಚುಮಾಡು. ಆದರೆ ನನ್ನನ್ನೆಂದೂ ಮರೆಯಬೇಡ" ಎಂದನು.

ಆಗಲೇ ಹೊರಟು ಬಂದಿದ್ದರೆ ಎಷ್ಟು ಚೆನ್ನಾಗಿರುತಿತ್ತು! ಆದರೆ ಆಂದು ನನ್ನ ಅದೃಷ್ಟ ನೆಟ್ಟಗಿರಲಿಲ್ಲ. ಫಕೀರನು ತನ್ನ ಅಂಗಿಯ ಕಿಸೆಗೆ ಸೇರಿಸಿದ್ದ ಭರಣಿಯ ಜ್ಞಾಪಕವಾಯಿತು. ಅದನ್ನೂ ಪಡೆದಹೊರತು ನನ್ನ ಅದೃಷ್ಟ ಪೂರ್ತಿಯಾಗದೆಂದು ತೋರಿತು. ಅದರಲ್ಲಿ ಮಹತ್ತರವಾದ ವಸ್ತುವೇನೋ ಇರಬೇಕು. ಇಲ್ಲದಿದ್ದರೆ ಫಕೀರನು ಆ ಭರಣಿಯನ್ನುಮಾತ್ರ ತನ್ನಬಳಿಯಿಟ್ಟುಕೊಂಡು ನನಗೆ ರತ್ನರಾಶಿಯನ್ನೆಲ್ಲಾ ಇಷ್ಟು ಸುಲಭವಾಗಿ ಬಿಟ್ಟುಕೊಡುತ್ತಿರಲಿಲ್ಲ.

"ಅಣ್ಣಾ, ಒಂದು ವಿಷಯ ಹೇಳು. ಆ ಅಂಜನದಿಂದ ಏನು ಮಾಡುವೆ? ನಿನ್ನ ಜ್ಞಾಪಕಾರ್ಥವಾಗಿ ಆ ಭರಣಿಯನ್ನು ನನಗೆ ಕೊಡಬಾರದೆ?" ಎಂದೆ. ಫಕೀರನು ಅದನ್ನು ಕೊಡದಿದ್ದರೆ ಆತನನ್ನು ಕೊಂದಾದರೂ ಅದನ್ನು ಪಡೆಯಲು ನಿರ್ಧರಿಸಿದೆ. ಆದರೆ ಆತನು ಮಂದಹಾಸದಿಂದ ಆ ಭರಣಿಯನ್ನು ಕೊಟ್ಟು "ನನ್ನಿಂದ ಇನ್ನು ಯಾವ ಸಹಾಯ ಬೇಕಾಗಿದ್ದರೂ ಹೇಳು, ಮಾಡುತ್ತೇನೆ" ಎಂದನು. ನಾನು ಭರಣಿಯ ಮುಚ್ಚಳ ತೆಗೆದು



"ಅಣ್ಣಾ, ಈ ಅಂಜನದಿಂದ ಆಗುವ ಉಪ ಯೋಗವೇನೋ ತುಸ ವಿವರವಾಗಿ ಹೇಳಿ ಪುಣ್ಯಕಟ್ಟಿಕೊ" ಎಂದೆ.

"ಈ ಅಂಜನವನ್ನು ಎಡಗಣ್ಣಿನ ರೆಪ್ಪೆಯ ಅಂಚಿಗೆ ಹಚ್ಚಿಕೊಂಡರೆ ಭೂಗರ್ಭದಲ್ಲಿರುವ ನಿಧಿನಿಕ್ಷೇಪಗಳೆಲ್ಲಾ ಕಾಣಿಸುವುವು. ಅದನ್ನು ಬಲಗಣ್ಣಿಗೆ ಹಚ್ಚಿಕೊಂಡರೆ ಎರಡು ಕಣ್ಣುಗಳೂ ಇಂಗಿಹೋಗುತ್ತವೆ" ಎಂದ ಫಕೀರ.

ಇಷ್ಟು ಹೇಳಿ ಫಕೀರನು ಹೋಗಲು ಸಿದ್ಧನಾದನು. ನಾನು ಆಗ ಆತನ ಅಂಗಿಯನ್ನು ಜಗ್ಗಿಹಿಡಿದು "ಇದರ ಪ್ರಭಾವವನ್ನೂ ಸಹ ನೀವೇ ತೋರಿಸಿದರೆ ಧನ್ಯನಾಗುವೆನು. ಅದನ್ನು ನನ್ನ ಎಡಗಣ್ಣಿಗೆ ಸ್ವಲ್ಪ ಬಳಿಯಿರಿ" ಎಂದೆ.

ಫಕೀರನು ಸ್ವಲ್ಪ ಅಂಜನವನ್ನು ತೆಗೆದು ನನ್ನ ಎಡಗಣ್ಣಿನ ರೆಪ್ಪೆಯಮೇಲೆ, ಮತ್ತು ಕಣ್ಣಿನ ಸುತ್ತಲೂ ಬಳಿದು "ಈಗ ಬಲಗಣ್ಣು ಮುಚ್ಚಿಕೊಂಡು, ಎಡಗಣ್ಣುಮಾತ್ರ ತೆಗೆದು ನೋಡು" ಎಂದನು. ನಾನು ಹಾಗೆಯೇ ಮಾಡಿದೆ. ನನ್ನ ಎಡಗಣ್ಣಿಗೆದುರಾಗಿರುವ ದೃಶ್ಯ ಕಾಣಿಸುವ ಬದಲಾಗಿ, ಭೂಮಿಯಲ್ಲಿ, ಬೆಟ್ಟಗಳಲ್ಲಿ, ಭಾರಿ ಭಾರಿ ವೃಕ್ಷಗಳ ಕೆಳಗೆ ಮತ್ತು ಸಮುದ್ರದ ತಳದಲ್ಲಿ ಇರುವ ನಿಧಿನಿಕ್ಷೇಪಗಳು ಕಾಣಿಸಿದುವು. ಬಲಗಣ್ಣು ತೆರೆದೆ. ಆಗ ನನಗೆ ಮಾಮೂಲು ದೃಷ್ಟಿ ಲಭಿಸಿತು.

ಎರಡನೇ ವಿಷಯ ನನಗೆ ಸಂದೇಹಾಸ್ಪದವಾಗಿ ತೋರಿತು. ಒಂದು ಕಣ್ಣಿಗೆ ಹಚ್ಚಿಕೊಂಡರೆ ಇಂತಹ ಅದ್ಭುತವಾದ ನೋಟ



ಕಾಣಬರುವ ಅಂಜನ ಮತ್ತೊಂದು ಕಣ್ಣಿಗೆ ಹಚ್ಚಿಕೊಂಡರೆ ಎರಡು ಕಣ್ಣು ಇಂಗಿಹೋಗುವು ದೆಂಬ ಮಾತಿನಲ್ಲಿ ಹುರಳಿಲ್ಲವೆಂದು ತೋರಿತು. ಬಲಗಣ್ಣಿಗೆ ಹಚ್ಚಿಕೊಳ್ಳದಂತೆ ಮಾಡುವ ಸಲುವಾಗಿ ಆತ ಈ ಬಗೆಯ ಹೆದರಿಕೆ ಹುಟ್ಟಿಸಿರ ಬಹುದೆಂದು ನನಗೆ ತೋರಿತು.

"ಅಣ್ಣಾ, ಅಂಜನವನ್ನು ಬಲಗಣ್ಣಿಗೂ ಹಚ್ಚು. ನನಗೆ ಗೊತ್ತಿದೆ. ಹಾಗೆ ಲೇಪಿಸಿದರೆ ನಾನು ಕಂಡ ನಿಧಿಗಳೆಲ್ಲ ನನ್ನ ವಶವಾಗುವು ವೆಂದು ಮೋಸಮಾಡುವೆಯಾ?" ಎಂದೆ.

ಈಬಾರಿ ಫಕೀರನಿಗೆ ನನ್ನ ಮೇಲೆ ವಿಪರೀತ ಕೋಪಬಂತು. "ನಿನ್ನ ನಾಶವನ್ನು ನೀನೇ ಕೋರಿಕೊಳ್ಳುತ್ತಿರುವೆ. ನಾನು ಅಂಥ ಕೆಲಸ ಮಾಡಲಾರೆ. ನನ್ನನ್ನು ಹೋಗಲು ಬಿಡು" ಎಂದನಾತ. ಆದರೆ ನಾನು ಆತನನ್ನು ಹೋಗಲು ಬಿಡದೆ, ನನ್ನ ಬಲಗಣ್ಣಿಗೂ ಸಹ ಅಂಜನವನ್ನು ಆತನಿಂದ ಹಚ್ಚಿಸಿ ಕೊಂಡೆ. ಕೂಡಲೇ ನನ್ನ ಕಣ್ಣುಗಳೆರಡೂ ಕುರುಡಾಗಿಹೋದುವು.

ನನಗೆ ದೃಷ್ಟಿಲಾಭವನ್ನುಮಾತ್ರ ಕೊಡು ವಂತೆ ಫಕೀರನನ್ನು ಪರಿಪರಿಯಾಗಿ ಬೇಡಿ ಕೊಂಡೆ. ಆದರೆ ಫಕೀರನು ಜವಾಬುಕೊಡದೆ ರತ್ನ ತುಂಬಿದ ಚೀಲಗಳನ್ನು ಹೇರಿದ್ದ ನನ್ನ ಎಂಬತ್ತು ಒಂಟೆಗಳೊಂದಿಗೆ ಹೊರಟು ಹೋದನು. ನಾನು ಅಲ್ಲೇ, ಒಬ್ಬೊಂಟಿಗನಾಗಿ ಉಳಿದೆನು. ಮಾರನೇಯದಿನ ಅತ್ತಕಡೆ ಬಂದ ವರ್ತಕರು ನನ್ನನ್ನು ಬಾಗದಾದಿಗೆ ತಂದು ಸೇರಿಸಿದರು. ಅಂದಿನಿಂದ ನಾನು ಭಿಕ್ಷುಕನಾಗಿ ನನಗೆ ಧರ್ಮಮಾಡಿದವರಿಂದ ಹೊಡೆಯಿಸಿ ಕೊಳ್ಳುವುದು ನನ್ನ ನಿಯಮ."

ಅವನ ದುಃಖಮಯವಾದ ಕಥೆಯನ್ನು ಖಲೀಫನು ಕೇಳಿ "ಬಾಬಾ ಅಬ್ದುಲ್ಲಾ, ನಿನ್ನ ದುರಾಸೆಗೆ ತಕ್ಕ ಶಿಕ್ಷೆ ಅನುಭವಿಸಿದೆ. ಇನ್ನುಮುಂದೆ ಭಿಕ್ಷೆ ಬೇಡದಿರು. ನಾನು ನಿನಗೆ ದಿನಾ ಹತ್ತು ದೀನಾರಗಳನ್ನು ಕೊಡುತ್ತಾ ಜೀವಿಸಿರುವಷ್ಟುಕಾಲವೂ ನಿನ್ನ ಪೋಷಣೆ ನಡೆಯಿಸುತ್ತೇನೆ" ಎಂದು ಹೇಳಿ, ಅದೇ ಪ್ರಕಾರ ಏರ್ಪಾಟುಗಳನ್ನು ಮಾಡಿಸಿದನು.



# ಕೈಗೆ ಸಿಕ್ಕದ ಶಿಕ್ಷೆ

ಹಠವನ್ನು ಬಿಡದ ತ್ರಿವಿಕ್ರಮನು ಮರದ ಬಳಿಗೆ ಪುನಃ ಹೋಗಿ, ಶವವನ್ನು ಕೆಳಕ್ಕೆ ಇಳಿಸಿ ಭುಜದಮೇಲೆ ಹಾಕಿಕೊಂಡು, ಮಸಣದತ್ತ ಮೌನವಾಗಿ ನಡೆಯುತ್ತಿದ್ದನು. ಆಗ ಶವದಲ್ಲಿದ್ದ ಬೇತಾಳ "ಎಲೈ ರಾಜನೇ, ಈ ಪ್ರಪಂಚದಲ್ಲಿ ನಿನ್ನಂತಹ ಸನ್ಮಾರ್ಗಿಗಗಳು ವ್ಯರ್ಥಶ್ರಮಕ್ಕೆ ಗುರಿಯಾಗುವರು. ರಾಜಭೂಷಣನಂತಹ ಮಹಾದ್ರೋಹಿಗಳು ಶಿಕ್ಷೆಗೆ ಸಿಲುಕದೆ ತಪ್ಪಿಸಿಕೊಳ್ಳುತ್ತಾರೆ. ಆತನ ಕಥೆಯನ್ನು ಹೇಳುವೆನು ಕೇಳು" ಎಂದು ಈ ರೀತಿ ಹೇಳಿತು:

ಪೂರ್ವಕಾಲದಲ್ಲಿ ಮಣಿಪ್ರಸ್ಥವೆಂಬ ನಗರದಲ್ಲಿ ರಾಜಭೂಷಣನೆಂಬ ವೈದ್ಯನಿದ್ದನು. ಅವನು ಭರತಖಂಡದಲೆಲ್ಲಾ ಸಂಚರಿಸಿದ್ದನು. ವಿವಿಧ ದೇಶಗಳಲ್ಲಿರುವ ಘನಪಂಡಿತರನ್ನು ಭೇಟಿಮಾಡಿ, ಅವರಿಂದ ಅನೇಕ ಚಿಕಿತ್ಸಾ ರಹಸ್ಯಗಳನ್ನು ತಿಳಿದುಕೊಂಡು, ಮಣಿಪ್ರಸ್ಥ ರಾಜನಬಳಿ ರಾಜವೈದ್ಯನಾಗಿದ್ದನು. ರಾಜ

ಭೂಷಣನು ವಯಸ್ಸಿನಲ್ಲಿ ಕಿರಿಯನಾಗಿದ್ದರೂ, ವೈದ್ಯ ವೃತ್ತಿಯಲ್ಲಿಮಾತ್ರವಲ್ಲದೆ, ಪರಾಕ್ರಮ ದಲ್ಲೂ ಅಸದೃಶನಾಗಿದ್ದನು.

ಮಣಿಪ್ರಸ್ಥದ ರಾಜಕುಮಾರ ಜಯ ಭದ್ರನು ದುರಂಹಂಕಾರಿ, ದುರ್ಮಾರ್ಗಿ. ಅವನು ತನ್ನ ವಯಸ್ಸಿನ ಕೆಲವು ಉಂಡಾಡಿ ಗಳಿಗೆ ಸಂಬಳಕೊಟ್ಟು ತನ್ನಬಳಿ ನೌಕರಿ ಗಿಟ್ಟಿಕೊಂಡಿದ್ದನು. ಅವರೊಂದಿಗೆ ಬೀದಿ ಬೀದಿ ಅಲೆಯುತ್ತಾ ಜನರಿಗೆ ಕೀಟಲೆಮಾಡುತ್ತ ಪ್ರಜಾಕಂಟಕನಾಗಿದ್ದನು.

ಜಯಭದ್ರನು ರಾಜಭೂಷಣನೊಂದಿಗೆ ಎರಡು ಮೂರುಬಾರಿ ಅಸಡ್ಡೆಯಿಂದ, ಅಲಕ್ಷ್ಯ ವಾಗಿ ನಡೆದುಕೊಂಡಿದ್ದನು. ಅವನ ವರ್ತನೆ ಕಂಡು ರಾಜವೈದ್ಯನಿಗೆ ಬಹಳ ಕೋಪ ಬಂದಿತ್ತು. ಆದರೆ ಒಂದು ದಿನ ರಾಜಭೂಷ ಣನು "ಮಹಾಪ್ರಭು, ಮಾನವನಿಗೆ ಉಚಿತ ವಾದ ಮರ್ಯಾದೆಯನ್ನು ಕಲಿತುಕೊಳ್ಳಿ" ಎಂದು ಕಟುವಾಗಿ ಹೇಳಿದ್ದನು.

ಜಯಭದ್ರನಿಗೆ ರಾಜಭೂಷಣನ ಮೇಲೆ ಆಗ್ರಹ ವುಂಟಾಯಿತು. "ಈ ರಾಜಭೂಷಣಗೆ ಒಂದು ದಿನ ಚೆನ್ನಾಗಿ ಬುದ್ಧಿ ಕಲಿಸಬೇಕು" ಎಂದುಕೊಂಡ. ಅವನಿಗೆ ಅಂತಹುದೊಂದು ಅವಕಾಶವೂ ಸಿಕ್ಕಿತು.

ಒಂದುದಿನ ಸಂಜೆ ಜಯಭದ್ರನೂ, ಅವನ ಮಿತ್ರನಾದ ವೀರವರ್ಮನೂ ಸವಾರಿ ಮಾಡುತ್ತಾ ಬರುತ್ತಿರಲು, ರಾಜಭೂಷಣನು ಅಶ್ವವೇರಿ ಅವರಿಗೆದುರಾಗಿ ಬಂದನು. ಜಯ ಭದ್ರನು ತನ್ನ ಕುದುರೆಯನ್ನು ರಾಜಭೂಷಣನ



ಕುದುರೆಗೆ ಅಡ್ಡವಾಗಿ ಓಡಿಸಿ "ನಿನಗೆ ಹೇಗೆ ಗೌರವ ತೋರಬೇಕೋ ನಾನು ಕಲಿತು ಕೊಂಡಿದ್ದೇನೆ. ಇದೇ ನಿನಗೆ ಕೊಡುವ ಮರ್ಯಾದೆ" ಎಂದು ಅವನನ್ನು ಕೊಲ್ಲಲು ತನ್ನ ಖಡ್ಗವನ್ನು ಮೇಲಕ್ಕೆ ಎತ್ತಿದನು.

ಆತ್ಮರಕ್ಷಣೆಗಾಗಿ ರಾಜಭೂಷಣನೂ ಕತ್ತಿ ಹಿಡಿಯಲೇ ಬೇಕಾಯಿತು. ಈರ್ವರೂ ಕುದುರೆಗಳ ಮೇಲಿಂದ ಇಳಿದು ಕಾದಾಡ ತೊಡಗಿದರು. ರಾಜಕುಮಾರನ ಸಂಗಡಿಗ ವೀರವರ್ಮನೂ ಕುದುರೆಯಿಂದ ಇಳಿದು, ಖಡ್ಗ ಹಿಡಿದು, ರಾಜಕುಮಾರನ ಸಹಾಯಕ್ಕೆ ಸಿದ್ಧವಾಗಿ ನಿಂತಿದ್ದನು.

ಜಯಭದ್ರನಿಗೆ ಬಾಯಿಮಾತಿನಲ್ಲಿದ್ದ ಪೌರುಷ ಕೈಗಳಲ್ಲಿರಲಿಲ್ಲ. ರಾಜಭೂಷಣನು ತನ್ನ ಖಡ್ಗದಿಂದ ರಾಜಕುಮಾರನ ತಲೆ ಕೆಡ ವಲು ಸಿದ್ಧನಾಗಲು ವೀರವರ್ಮನು ಅಡ್ಡ ಬಂದನು. ಮರುಕ್ಷಣವೇ ವೀರವರ್ಮನ ತಲೆ ಎರಡು ತುಂಡಾಯಿತು. ಜಯಭದ್ರನು ಕುದುರೆಯನ್ನೇರಿ ಪರಾರಿಯಾದನು.

ತಾನಿನ್ನು ಮಣಿಪ್ರಸ್ಥದಲ್ಲಿರುವುದು ಕ್ಷೇಮವಲ್ಲವೆಂದು ರಾಜಭೂಷಣನು ಗ್ರಹಿ ಸಿದನು. ಅಂದೇ ಆ ನಗರವನ್ನು ಬಿಡಲು ನಿರ್ಧರಿಸಿ, ಕುದುರೆಯನ್ನು ನೆರೆ ರಾಜ್ಯದಕಡೆ ವೇಗವಾಗಿ ಓಡಿಸಿದನು. ಬೆಳಗಾಗುವಷ್ಟರಲ್ಲಿ ಆ ರಾಜ್ಯವನ್ನು ತೊರೆದರೆ ಯಾವಭೀತಿಯೂ ಇರಲಾರದು. ಅವನು ರಾತ್ರಿಯೆಲ್ಲಾ ಪ್ರಯಾಣಮಾಡಿದನು. ಆದರೆ ಸರಿಹದ್ದನ್ನು ದಾಟುವಮೊದಲೇ ಬೆಳಗಾಯಿತು.





ಕುದುರೆ ಓಡಿಓಡಿ ತುಂಬಾ ಬಳಲಿತ್ತು. ರಾಜಭೂಷಣನೂ ಆಯಾಸಗೊಂಡಿದ್ದನು. ಇಬ್ಬರಿಗೂ ನಿದ್ರಾಹಾರಗಳಿರಲಿಲ್ಲ. ಅವನಿಗೆ ಬೆಳಗಾಗುವವೇಳೆಗೆ ಒಂದು ಗ್ರಾಮ ಕಾಣಿಸಿತು. ಹಗಲೆಲ್ಲಾ ಯಾರ ಮನೆಯಲ್ಲಾದರೂ ವಿಶ್ರಾಂತಿ ತೆಗೆದುಕೊಂಡು ಮತ್ತೆ ಕತ್ತಲಾದ ನಂತರ ಪ್ರಯಾಣವನ್ನು ಮುಂದುವರಿಸಬೇಕೆಂದು ನಿರ್ಧರಿಸಿದನು.

ಶತ್ರುಂಜಯವರ್ಮನೆಂಬಾತನ ಮನೆಯಲ್ಲಿ ರಾಜಭೂಷನಿಗೆ ಆಶ್ರಯ ಸಿಕ್ಕಿತು. ಶತ್ರುಂಜಯನು ವೃದ್ಧನು. ಆತನು ಸಾಹುಕಾರನಲ್ಲದಿದ್ದರೂ ಉನ್ನತ ವಂಶದಲ್ಲಿ ಜನಿಸಿದ್ದನು. ಆತನ ಅಳಿಯ ಆ ಗ್ರಾಮಕ್ಕೆ ಅಧಿಕಾರಿ. ಆತನ ಮಗನೇ ವೀರವರ್ಮ. ವೀರವರ್ಮನು ಮರಣಹೊಂದಿದ ಸುದ್ದಿ ಆ ಗ್ರಾಮಕ್ಕೆ ಬಂದಿರಲಿಲ್ಲ. ತನ್ನ ಮಗನನ್ನು ಕೊಂದ ಕೊಲೆಪಾತಕನಿಗೆ ತಾನು ಆಶ್ರಯವಿತ್ತಿರುವ ವಿಷಯ ಶತ್ರುಂಜಯನಿಗೂ ತಿಳಿಯದು. ತನಗೆ ಆಶ್ರಯ ಮತ್ತು ಆತಿಥ್ಯ ಕೊಟ್ಟ ವೃದ್ಧನು ತನ್ನ ಕೈಯಿಂದ ಕೊಲ್ಲಲ್ಪಟ್ಟ ಯುವಕನ ತಂದೆ ಎಂಬ ವಿಷಯ ರಾಜಭೂಷನಿಗೂ ತಿಳಿಯದು. ರಾಜಭೂಷಣನು ಹಗಲೆಲ್ಲಾ ವಿಶ್ರಾಂತಿ ಪಡೆದನು. ಸಾಯಂಕಾಲ ಅವನು ಶತ್ರುಂಜಯನೊಂದಿಗೆ ಮಾತುಕತೆಯಾಡುತ್ತಿರುವಾಗ ರಾಜಭೂಷಣನಿಗೆ ವಾಸ್ತವಾಂಶ ತಿಳಿಯಿತು. ಶತ್ರುಂಜಯನ ಮಗನೇ ತನ್ನ ಕೈಯಲ್ಲಿ ಹತನಾದ ಯುವಕನೆಂದು ತಿಳಿದಕೂಡಲೇ ರಾಜಭೂಷಣನಿಗೆ ಪಶ್ಚಾತ್ತಾಪ ಉಂಟಾಯಿತು. ಭಯವೂ ಆಯಿತು. ಇನ್ನು ತಾನು ಆ ಗ್ರಾಮದಲ್ಲಿರುವುದು ಕ್ಷೇಮಕರವಲ್ಲವೆನ್ನಿಸಿತು. ಈಗಲೋ ಆಗಲೋ ವೀರವರ್ಮನ ಮರಣವಾರ್ತೆ ಗ್ರಾಮಕ್ಕೆ ತಲುಪುವುದು. ಮುದುಕನು ತನ್ನನ್ನು ಖಂಡಿತ ಶಿಕ್ಷಿಸುತ್ತಾನೆ. ಆತನ ಅಳಿಯ ಗ್ರಾಮಾಧಿಕಾರಿ !!

ಆದುದರಿಂದ ರಾಜಭೂಷಣನು ಮೆಲ್ಲನೆದ್ದು "ಇನ್ನು ನನಗೆ ಅಪ್ಪಣೆಕೊಡಿ. ನಿಮ್ಮ ಪುಣ್ಯದಿಂದ ನಾನೂ ನನ್ನ ಕುದುರೆಯೂ ಬಳಲಿಕೆಯಿಂದ ಚೇತರಿಸಿಕೊಂಡಿದ್ದೇವೆ. ನಾನಿನ್ನೂ ಬಹಳದೂರ ಹೋಗಬೇಕಾಗಿದೆ" ಎಂದನು. ಶತ್ರುಂಜಯನು "ಅದೇಕೆ ತಮ್ಮಾ,



ಇನ್ನು ಕೊಂಚಹೊತ್ತಿಗೆ ಕತ್ತಲಾಗುತ್ತದೆ. ನಾಳೆ ಬೆಳಗ್ಗೆ ಹೋದರಾಗದೇ?" ಎಂದನು.

"ಇಲ್ಲ, ಕ್ಷಮಿಸಿ. ನನಗೆ ರಾತ್ರಿ ಪ್ರಯಾಣ ಅಭ್ಯಾಸವಾಗಿದೆ" ಎಂದು ರಾಜಭೂಷಣನು ಪ್ರಯಾಣ ಸನ್ನದ್ಧನಾದನು.

ಅಷ್ಟರಲ್ಲಿ ಶತ್ರುಂಜಯುನ ಅಳಿಯುನ ಮನೆಯ ನೌಕರನು ಬಂದು "ಸ್ವಾಮಿ, ಅಮ್ಮಾವರಿಗೆ ಅಕಾಲ ಪ್ರಸವವೇದನೆ ಆರಂಭ ವಾಗಿದೆ. ಪ್ರಜ್ಞೆತಪ್ಪಿ ಬಿದ್ದುಬಿಟ್ಟದ್ದಾರೆ. ವೈದ್ಯರು ತಮ್ಮ ಕೈಯಲ್ಲೇನೂ ಸಾಧ್ಯವಿಲ್ಲ ವೆಂದು ಹೇಳುತ್ತಿದ್ದಾರೆ. ಪಂಡಿತರನ್ನು ಕರೆ ಯಿಸಬೇಕೆಂದು ಮನೆಯಲ್ಲಿ ಹೇಳಿದರು" ಎಂದನು. ತನ್ನ ಮಗಳು ಪ್ರಾಣಾಪಾಯ ಸ್ಥಿತಿಯಲ್ಲಿರುವಳೆಂಬ ವಿಷಯ ತಿಳಿದು ಶತ್ರುಂ ಜಯನಿಗೆ ಪ್ರಾಣವೇ ಹೋಧಂತಾಯಿತು. ಒಂದುಕಡೆ ಕತ್ತಲಾಗುತ್ತಿದೆ. ಮಣಿಪ್ರಸ್ಥ ದಿಂದ ಪಂಡಿತರನ್ನು ಕರೆತರಲು ಸಮಯ ವಿಲ್ಲ. ಆತನ ತಳಮಳವನ್ನು ಕಂಡು ರಾಜ ಭೂಷಣನು ತನ್ನ ಪ್ರಯಾಣವನ್ನು ನಿಲ್ಲಿಸಿ "ತಮಗೆ ಅಭ್ಯಂತರವಿಲ್ಲದ ಪಕ್ಷಕ್ಕೆ ನಾನು ರೋಗಿಯನ್ನು ಪರೀಕ್ಷಿಸುತ್ತೇನೆ. ನಾನೂ ಒಬ್ಬ ಹೆಸರಾಂತ ಪಂಡಿತ. ನನ್ನದೂ ಮಣಿ ಪ್ರಸ್ಥ ನಗರವೇ" ಎಂದು ಶತ್ರುಂಜಯ ನೊಂದಿಗೆ ಹೇಳಿದನು.

ಶತ್ರುಂಜಯನಿಗೆ ಜೀವ ಬಂದಂತಾಯಿತು. ರಾಜಭೂಷಣನನ್ನು ಸಂಗಡ ಕರೆದುಕೊಂಡು ಅಳಿಯನ ಮನೆಗೆ ಹೋದನು. ರಾಜ



ಭೂಷಣನು ರೋಗಿಯನ್ನು ನೋಡಿ, ನಾಡಿ ಪರೀಕ್ಷಿಸಿ "ನಾನು ಈಗಲೇ ಬಂದುದು ಒಳಿ ತಾಯಿತು. ತುಸ ತಡವಾಗಿದ್ದರೆ ಪ್ರಮಾದ ವಾಗುತಿತ್ತು. ಈಕೆ ಅತ್ಯಂತ ಪ್ರಮಾದಾವಸ್ಥೆ ಯಲ್ಲಿದ್ದಾಳೆ. ಆದರೆ ಈಕೆಯ ಪ್ರಾಣವನ್ನು ಉಳಿಸಬಲ್ಲೆನೆಂದು ನಿಮಗೆ ಭರವಸೆ ಕೊಡ ಬಲ್ಲೆ. ಬಹುಶಃ ಬೆಳಗಾಗುವಷ್ಟರಲ್ಲಿ ಪ್ರಸ ವವೂ ಆಗಬಹುದು. ತಾಯಿ ಮತ್ತು ಮಗು ವಿನ ಪ್ರಾಣಗಳು ಉಳಿಯುವಂತೆ ಮಾಡು ವೆನು. ನೀವು ಸ್ವಲ್ಪಕೂಡ ಅಧೈರ್ಯ ಪಡ ಬೇಕಾಗಿಲ್ಲ" ಎಂದನು.

ಅರ್ಧರಾತ್ರಿಯ ವೇಳೆಗೆ ಮಣಿಪ್ರಸ್ಥದಿಂದ ಗ್ರಾಮಾಧಿಕಾರಿಗೆ ಸುದ್ದಿ ಬಂತು. "ಹಿಂದಿನ ರಾತ್ರಿ ರಾಜವೈದ್ಯ ರಾಜಭೂಷಣನೆಂಬಾತನು





ರಾಜಕುಮಾರ ಜಯಭದ್ರನಮೇಲೆ ಮತ್ತು ಆತನ ಮಿತ್ರನಾದ ವೀರವರ್ಮನ ಮೇಲೆ ಬಿದ್ದು, ವೀರವರ್ಮನನ್ನು ಕೊಂದು ಪರಾರಿ ಯಾಗಿದ್ದಾನೆ. ಆ ರಾಜದ್ರೋಹಿ ನಿಮ್ಮ ಗ್ರಾಮದಕಡೆ ಬಂದರೆ ಹಿಡಿದು, ವಿಚಾರಣೆ ನಡೆಯಿಸಿ, ಮರಣದಂಡನೆ ವಿಧಿಸಿರಿ '' ಎಂದು ಒಂದು ಪತ್ರ ಬಂದಿತ್ತು.

ತನ್ನ ಮಗನ ಮರಣವಾರ್ತೆ ಕೇಳಿದ ಕೂಡಲೇ ಶತ್ರುಂಜಯನು ಮೂರ್ಛಿತ ನಾದನು. ಆತನಿಗೆ ವೀರವರ್ಮನೊಬ್ಬನೇ ಮಗ. ಅವನು ಬದುಕಿಬಾಳಿ ತನ್ನ ಕೀರ್ತಿ ಯನ್ನು, ವಂಶವನ್ನು ಉಳಿಸುವನೆಂದು ಶತ್ರುಂ ಜಯನು ಕನಸು ಕಾಣುತ್ತಿದ್ದನು. ಆದರೆ ಈಗ ಆ ಕನಸೆಲ್ಲಾ ಒಮ್ಮೆಗೇ ಮಣ್ಣುಪಾಲಾ ಯಿತು. ಕೊಂಚಹೊತ್ತಿನನಂತರ ಶತ್ರುಂ ಜಯನು ಚೇತರಿಸಿಕೊಂಡನು. ಆ ದುಃಖದಲ್ಲಿ ಆಕಸ್ಮಾತ್ತಾಗಿ ಆತನಿಗೆ ತನ್ನ ಅತಿಥಿಯ ಜ್ಞಾಪಕವಾಯಿತು. ಅತಿಥಿಯ ಹೆಸರು ತಿಳಿಯ ದಿದ್ದರೂ ಉಳಿದೆಲ್ಲ ಅಂಶಗಳಲ್ಲಿ ಆತನು ರಾಜ ದ್ರೋಹಿಯನ್ನು ಹೋಲುತ್ತಿದ್ದನು. ಮಣಿ ಪ್ರಸ್ಥದ ವೈದ್ಯನೆಂದು ಆತನೇ ಹೇಳಿಕೊಂ ಡಿದ್ದಾನೆ. ರಾತ್ರಿಯೆಲ್ಲಾ ಪ್ರಯಾಣಮಾಡಿ ಹೊತ್ತುಹರಿಯುವ ವೇಳೆಗೆ ಗ್ರಾಮಕ್ಕೆ ಬಂದ. ಅವನೇ ರಾಜಭೂಷಣನಿರಬೇಕೆಂದು ಶತ್ರುಂ ಜಯನಿಗೆ ಖಚಿತವಾಯಿತು. ಪಾಪಿಯನ್ನು ತನ್ನ ಕೈಯಿಂದಲೇ ಕೊಂದು ಸೇಡು ತೀರಿಸಿ ಕೊಳ್ಳಬೇಕೆನಿಸಿತು. ಆ ವೃದ್ಧನಿಗೆ. ಕೂಡಲೇ ಆತನು ಯಾರೊಂದಿಗೂ ಒಂದು



ಮಾತನ್ನೂ ಹೇಳದೆ ಹೆರಿಗೆ ಕೋಣೆಯತ್ತ ಓಡಿದನು. ಒಂದು ಮೂಲೆಯಲ್ಲಿ ಅವನಿಗೆ ಕೊಡಲಿ ಕಾಣಿಸಿತು. ಅದನ್ನು ತೆಗೆದುಕೊಂಡು ಆತನು ಮಗಳಿದ್ದ ಕೋಣೆಗೆ ದಢಾರನೆ ಪ್ರವೇಶಿಸಿದನು. ಆತನ ಮಗಳು ಮಂಚದಮೇಲೆ ಮಲಗಿದ್ದಳು. ರಾಜಭೂಷಣನು ಕೊಂಚ ದೂರ ಸರಿದು ನಿಂತು ಕೈಯಲ್ಲಿ ಏನನ್ನೋ ಹಿಡಿದುಕೊಂಡಿದ್ದನು. "ರಾಜಭೂಷಣ" ಎಂದು ಭೀಕರವಾಗಿ ಅರಚಿದನು ಶತ್ರುಂಜಯ.

ರಾಜಭೂಷಣನು ತಟಕ್ಕನೆ ಹಿಂದಕ್ಕೆ ತಿರುಗಿ ನೋಡಿದನು. ಶತ್ರುಂಜಯುನಿಗೆ ಇದ್ದ ಸ್ವಲ್ಪ ಸಂದೇಹವೂ ಮಾಯವಾಯಿತು. ಆದರೆ ಆತನಿಗೆ ಆ ಕ್ಷಣವೇ ರಾಜಭೂಷಣನ ಕೈಯಲ್ಲಿದ್ದ ಹಾಲುಹಸುಳೆ ಕಾಣಿಸಿತು.

"ಆರ್ಯ, ನನ್ನ ಕಾರ್ಯ ಸುಗಮವಾಗಿ ನೆರವೇರಿತು. ನಿಮ್ಮ ಮಗಳಿಗಾಗಲೀ, ಈ ಹಸುಳೆಗಾಗಲಿ ಇನ್ನು ಯಾವ ಆಪತ್ತೂ ಇಲ್ಲ" ಎಂದ ರಾಜಭೂಷಣ. ಶತ್ರುಂಜಯನ ಕೈಯಲ್ಲಿದ್ದ ಕೊಡಲಿ ಜಾರಿ ಕೆಳಗೆ ಬಿತ್ತು.

"ಅಯ್ಯಾ, ಈ ಮನೆಯಲ್ಲಿ ನಿನಗೆ ಭಾರಿ ಆಪತ್ತು ಕಾದಿದೆ. ನೀನು ಕೂಡಲೇ ಇಲ್ಲಿಂದ ಹೊರಟುಬಿಡು" ಎಂದು ಶತ್ರುಂಜಯನು ಒಂದೇ ಉಸಿರಿನಲ್ಲಿ ಹೇಳಿದನು.

ರಾಜಭೂಷಣನು ತಕ್ಷಣ ಅಲ್ಲಿಂದ ಹೊರಟು ಬೆಳಗಾಗುವಷ್ಟರಲ್ಲಿ ಆ ರಾಜ್ಯದ ಗಡಿಯನ್ನು ದಾಟಿ ನೆರೆರಾಜ್ಯವನ್ನು ಪ್ರವೇಶಿಸಿದನು. ಮತ್ತು ಆ ರಾಜನ ಆಸ್ಥಾನದಲ್ಲಿ ನೌಕರಿ ಸಂಪಾದಿಸಿಕೊಂಡನು.



ಬೇತಾಳ ಈ ಕಥೆ ಹೇಳಿ "ರಾಜನೇ, ನನಗೊಂದು ಸಂದೇಹ. ತಾನು ಶತ್ರುಗಳ ಮನೆಯಲ್ಲಿ ಆತಿಥ್ಯಪಡೆದೆನೆಂದು ತಿಳಿದೂ ಸಹ ಶತ್ರುಂಜಯನ ಮಗಳಿಗೆ ಚಿಕಿತ್ಸೆ ಮಾಡಲು ರಾಜಭೂಷಣನು ನಿಂತುದೇಕೆ? ತನ್ನ ಪ್ರಾಣವನ್ನು ಕಾಪಾಡಿಕೊಳ್ಳುವಸಲುವಾಗಿ ಮಣಿಪ್ರಸ್ಥದಿಂದ ಓಡಿಬಂದ ವ್ಯಕ್ತಿ, ಅಪಾಯ ಸನ್ನಿಹಿತವಾಯಿತೆಂದು ತಿಳಿದೂ ಸಹ ಶತ್ರುಂಜಯನ ಮನೆಯಿಂದ ಪರಾರಿಯಾಗದಿರಲು ಕಾರಣವೇನು? ಅದು ಅಂತಿರಲಿ. ಶತ್ರುಂಜಯನು ರಾಜಭೂಷಣನ ತಲೆಯೊಡೆಯುವ ಬದಲು ಎಚ್ಚರಿಕೆ ಕೊಟ್ಟು ಕಳುಹಿಸಿಬಿಟ್ಟ ನೇಕೆ? ಈ ಪ್ರಶ್ನೆಗೆ ಉತ್ತರ ತಿಳಿದಿದ್ದೂ ಸಹ ಸಮಾಧಾನ ಕೊಡದಿದ್ದರೆ ನಿನ್ನ ತಲೆ ಸಾವಿರ ಹೋಳುಗಳಾದೀತು ಎಚ್ಚರಿಕೆ" ಎಂದಿತು.

"ತನ್ನ ಜೀವದಮೇಲೆ ಆಶೆಯಿದ್ದರೂ ಸಹ ತನ್ನ ಪ್ರಾಣ ಕಾಪಾಡಿಕೊಳ್ಳುವ ಸಲುವಾಗಿ ತನ್ನ ಕರ್ತವ್ಯಧರ್ಮವನ್ನು ತೊರೆಯುವಂತಹ ಅಧಮನಲ್ಲ ರಾಜಭೂಷಣ. ಶತ್ರುಂಜಯನ ಮಗಳ ಪ್ರಾಣವನ್ನು ಕಾಪಾಡುವುದರಿಂದ ಅವನು ತನ್ನ ಅತಿಥಿಧರ್ಮವನ್ನು ಪಾಲಿಸಿದನು. ಶತ್ರುಂಜಯನು ತನ್ನ ಮಗನನ್ನು ರಾಜಭೂಷಣನಿಂದ ಕಳೆದುಕೊಂಡಿದ್ದರೂ, ಆತನಿಂದಲೇ ತನ್ನ ಮಗಳು ಮತ್ತು ಮೊಮ್ಮೊಗುವಿನ ಪ್ರಾಣವನ್ನು ಉಳಿಸಿಕೊಂಡನು. ವೃದ್ಧಾಪ್ಯದಲ್ಲಿ ತನ್ನ ಮೊಮ್ಮೊಗನನ್ನು ಕಣ್ಣಾರೆ ಕಂಡನು. ಎರಡು ಪ್ರಾಣಗಳನ್ನು ಉಳಿಸುವಸಲುವಾಗಿ ರಾಜಭೂಷಣನು ತನ್ನ ಪ್ರಾಣವನ್ನು ಒಡ್ಡಿ ಓಡಿಹೋಗುವ ಅವಕಾಶವನ್ನೂ ಕಳೆದುಕೊಂಡನೆಂಬ ವಿಷಯ ಗ್ರಹಿಸಿದ ಶತ್ರುಂಜಯನಿಗೆ ಆತನನ್ನು ಕೊಲ್ಲಲು ಮನಬರಲಿಲ್ಲ" ಎಂದು ಉತ್ತರ ಹೇಳಿದ ತಿವಿಕ್ರಮ.

ರಾಜನಿಗೆ ಈ ರೀತಿಯಾಗಿ ಮೌನಭಂಗ ವುಂಟಾದಕೂಡಲೇ ಬೇತಾಳ ಯಥಾಪ್ರಕಾರ ಶವದೊಂದಿಗೆ ಮಾಯವಾಗಿ, ಮತ್ತೆ ಅದೇ ಮರದ ಕೊಂಬೆಗೆ ಹೋಗಿ ಸೇರಿಕೊಂಡು ನೇತಾಡಲಾರಂಭಿಸಿತು.






## 16

[ ಇಪ್ಪತ್ತು ವರ್ಷಗಳನಂತರ ಸ್ವದೇಶಕ್ಕೆ ಹಿಂತಿರುಗಿ ಬಂದ ರೂಪಧರನು ತನ್ನ ಮನೆಯಲ್ಲಿ ಅಡಿಯಿಡಲು ಒಬ್ಬ ವೃದ್ಧ ಭಿಕ್ಷುಕನ ರೂಪ ಧರಿಸಬೇಕಾಯಿತು. ಆತನ ರಹಸ್ಯ ಧೀರಮತಿಗೆಮಾತ್ರ ತಿಳಿದಿತ್ತು. ರೂಪಧರನ ಮಡದಿಯಾದ ಪದ್ಮಮುಖಿಯನ್ನು ವಿವಾಹವಾಗುವ ಉದ್ದೇಶದಿಂದ ಆತನ ಮನೆ ಸೇರಿ ಆತನ ಆಸ್ತಿಯನ್ನು ತಿಂದು ತೇಗುತ್ತಿದ್ದ ದುರುಳರು ಈ ವೃದ್ಧನನ್ನು ಪರಿಹಾಸ್ಯಮಾಡಿದರು; ಹಿಂಸಿಸಿದರು. ಆದರೆ ರೂಪಧರನು ಅದನ್ನು ಸಹಿಸಿ ಪ್ರತೀಕಾರಮಾಡಲು ಸಮಯ ಸಾಧಿಸುತ್ತಿದ್ದನು. ಆ ರಾತ್ರಿ ಎಲ್ಲರೂ ಹೊರಟುಹೋದಮೇಲೆ ರೂಪಧರ ಮತ್ತು ಧೀರಮತಿಮಾತ್ರ ಉಳಿದರು ]

ರೂಪಧರನು ಧೀರಮತಿಯೊಡನೆ "ಮಗೂ, ಗೋಡೆಯಮೇಲಿರುವ ಆಯುಧಗಳನ್ನೆಲ್ಲಾ ತೆಗೆದು ಉಗ್ರಾಣದಲ್ಲಿಟ್ಟುಬಿಡು. ಯಾರಾದರೂ ಕೇಳಿದರೆ ತುಕ್ಕು ಹಿಡಿಯುವುದೆಂದು ಒಳಗಿಡಿಸಿರುವುದಾಗಿ ಹೇಳು" ಎಂದನು.

ಧೀರಮತಿ ತನ್ನ ತಾಯಿಯಬಳಿಯಿದ್ದ ದಾಸಿಯರಲ್ಲಿ ಹಿರಿಯಳಾದ ಬಹುಕೀರ್ತಿ ಎಂಬಾಕೆಯನ್ನು ಕರೆದು "ಅಜ್ಜೀ, ದಾಸಿಯರೆಲ್ಲ ಅವರವರ ಕೋಣೆಗಳಿಗೆ ಹೋಗಿ ಬಾಗಿಲು ಹಾಕಿಕೊಳ್ಳುವಂತೆ ಹೇಳು. ನನ್ನ ತಂದೆಯವರು ಹೊರಟುಹೋದನಂತರ ಈ ಆಯುಧಗಳಕಡೆ ಯಾರೂ ಗಮನ ಕೊಡಲಿಲ್ಲ. ಇನ್ನು ಮುಂದೆ ಇವುಗಳನ್ನು ಕಾಪಾಡುವ ಕರ್ತವ್ಯ ನನ್ನದಷ್ಟೇ" ಎಂದ. "ಮನೆಯ ಯಜಮಾ

ಒಂದು ಗ್ರೀಕ್ ಪುರಾಣಕಥೆಯ ಆಧಾರದಿಂದ




ನಿಕೆಯೆಲ್ಲಾ ನೀನೇ ವಹಿಸಿಕೊಳ್ಳಪ್ಪ ಮಗು!" ಎಂದಳು ಬಹುಕೀರ್ತಿ. ಬಹುಕೀರ್ತಿ ರೂಪ ಧರನ ದಾದಿಯಾಗಿದ್ದಳು.

ಆಕೆ ಹೊರಟುಹೋದಕೂಡಲೇ ರೂಪಧರ ಧೀರಮತಿಯರು ಗೋಡೆಗೆ ತಗುಲಿಸಿದ್ದ ಢಾಲು, ಶಿರಸ್ತ್ರಾಣ, ಈಟಿ ಮುಂತಾದ ಆಯುಧ ಸಾಮಗ್ರಿಗಳನ್ನು ಒಂದು ಕೋಣೆಗೆ ಸೇರಿಸಿ ದರು. ಈ ಕಾರ್ಯ ಮುಗಿದನಂತರ ರೂಪ ಧರನನ್ನು ಪಡಸಾಲೆಯಲ್ಲಿಬಿಟ್ಟು, ಧೀರಮತಿ ತನ್ನ ಶಯನಾಗಾರಕ್ಕೆ ಹೋದನು.

ಕೊಂಚಹೊತ್ತಿನನಂತರ ಪದ್ಮಮುಖಿ ಪಡ ಸಾಲೆಗೆ ಬಂದು ಒಂದು ಆಸನದಮೇಲೆ ಕುಳಿತುಕೊಂಡಳು. ದಾಸಿಯರು ಅಗ್ಗಿಷ್ಟಿಕೆಗೆ ಮತ್ತಷ್ಟು ಸೌದೆ ಹಾಕಿದರು. ದಾಸಿ



ಯೊಬ್ಬಳು ರೂಪಧರನನ್ನು ಕಂಡು "ಎಲಾ, ಇನ್ನೂ ಇಲ್ಲೇ ಇರುವೆಯಾ? ತಿಂದಿದ್ದು ಸಾಲದೇ?" ಎಂದು ಹಂಗಿಸಿದಳು.

"ಬುದ್ಧಿಗೆಟ್ಟವಳೇ, ನಾನು ಆತನೊಂದಿಗೆ ಮಾತನಾಡಲು ಬಂದಿರುವೆನೆಂದು ತಿಳಿದೂ ಸಹ ಹಾಗೇಕೆ ಒದರುವೆ?" ಎಂದು ಪದ್ಮ ಮುಖಿ ಅವಳನ್ನು ಗದರಿಸಿ, ರೂಪಧರನಿಗಾಗಿ ತನ್ನ ಎದುರಾಗಿ ಒಂದು ಪೀಠವನ್ನು ಹಾಕಿ ಸಿದಳು. ರೂಪಧರನು ಅದರಮೇಲೆ ಕುಳಿತ ನಂತರ "ಅಯ್ಯಾ, ತಾವುಯಾರು? ನಿಮ್ಮ ದೇಶ ಯಾವುದು?" ಎಂದು ಪ್ರಶ್ನಿಸಿದಳು.

ರೂಪಧರನು ಒಂದು ಕಟ್ಟುಕಥೆ ಕಲ್ಪಿಸಿ ಹೇಳಿದನು. ತನ್ನ ದೇಶ ಸಿಸಿಲಿ ಎಂತಲೂ, ಯುದ್ಧಕ್ಕೆ ಹೋಗುವ ದಾರಿಯಲ್ಲಿ ರೂಪ ಧರನು ತನ್ನ ಅತಿಥಿಯಾಗಿದ್ದನೆಂತಲೂ ಹೇಳಿ ದನು. ಆಕೆಗೆ ನಂಬಿಕೆಯುಂಟಾಗುವಂತೆ ಮಧ್ಯೆಮಧ್ಯೆ ರೂಪಧರನು ಧರಿಸಿಕೊಂಡಿದ್ದ ಪೋಷಾಕನ್ನು ಬಣ್ಣಿಸಿದನು. ಆ ಪೋಷಾ ಕನ್ನು ಪದ್ಮಮುಖಿ ತನ್ನ ಪತಿಗೆ ಪ್ರಯಾಣ ಸಮಯದಲ್ಲಿ ಕೊಟ್ಟಿದ್ದಳು. ಆ ಬಣ್ಣನೆ ಕೇಳಿ ಪದ್ಮಮುಖಿ ಕಂಬನಿಮಿಡಿದಳು.

ಆಕೆ ಬಹುಕೀರ್ತಿಯನ್ನು ಕರೆದು "ಈ ಅತಿಥಿ ನಿಮ್ಮ ಯಜಮಾನರಗೆಳೆಯರು. ಅವರ ಕಾಲುಗಳನ್ನು ತೊಳಿ" ಎಂದು ಆಜ್ಞಾಪಿಸಿದಳು. ಬಹುಕೀರ್ತಿ ಒಂದು ದೊಡ್ಡ ಪಾತ್ರೆಯಲ್ಲಿ ಉಗುರು ಬೆಚ್ಚನೆಯ ನೀರನ್ನು ತಂದಳು. ಅವಳು ರೂಪಧರನ ಪಾದಗಳನ್ನು







ತೊಳೆಯುತ್ತಿದ್ದಳು. ರೂಪಧರನು ತನ್ನ ದಟ್ಟಿಯನ್ನು ಎತ್ತಲು ಮೊಣಕಾಲಿನ ಮೇಲಿದ್ದ ಮಚ್ಚೆಯೊಂದು ಬಹುಕೀರ್ತಿಗೆ ಕಾಣಿಸಿತು. ಅದನ್ನು ಕಂಡಕೂಡಲೇ ಆಕೆಗೆ ರೂಪಧರನ ಗುರುತು ಸಿಕ್ಕಿತು. ಅವಳ ಕೈಯಲ್ಲಿದ್ದ ಪಾತ್ರೆ ದೊಪ್ಪನೆ ಕೆಳಗೆಬಿದ್ದು ನೀರೆಲ್ಲ ಕೆಳಗೆ ಚೆಲ್ಲಿಹೋಯಿತು. ಆಕೆ ಕಿಟಾರನೆ ಕಿರಿಚಲು ಬಾಯಿ ತೆರೆಯಲು, ರೂಪಧರನು ಸರಕ್ಕನೆ ಅವಳ ಬಾಯಿ ಮುಚ್ಚಿ "ಅಜ್ಜಿ, ನನ್ನ ರಹಸ್ಯ ಬಯಲುಮಾಡಿ ನನ್ನನ್ನು ನಾಶಗೊಳಿಸಬೇಡ. ಇಪ್ಪತ್ತು ವರ್ಷ ಅನೇಕ ಸಂಕಷ್ಟಗಳನ್ನು ಅನುಭವಿಸಿ ಮನೆ ಸೇರಿಕೊಂಡಿದ್ದೇನೆ. ಇನ್ನೂ ಕೆಲವಾರು ತೊಂದರೆಗಳಿವೆ. ಆತನಕ ಈ ವಿಷಯ ಗುಟ್ಟಾಗಿರಲಿ" ಎಂದು ಮೆಲ್ಲನುಸಿರಿದನು. ಬಹುಕೀರ್ತಿ ರೂಪಧರನ ಸ್ಥಿತಿಯನ್ನು ಅರ್ಥಮಾಡಿಕೊಂಡು, ಮತ್ತೆ ನೀರು ತರಲು ಹೋದಳು.

ಆ ಮಚ್ಚೆ ಆತನು ಬಾಲಕನಾಗಿದ್ದಾಗ ಆಗಿತ್ತು. ಆತನು ಯುವಕನಾಗಿದ್ದಾಗ ಕಪ್ಪ ಕಾಣಿಕೆಗಳನ್ನು ಕೊಡುವುದಾಗಿ ಹೇಳಿ ಆತನ ಸೋದರಮಾವಂದಿರು ತಮ್ಮಲ್ಲಿಗೆ ಬರಮಾಡಿಕೊಂಡಿದ್ದರು. ಒಂದುದಿನ ರೂಪಧರನು ತನ್ನ ತಾತ ಮತ್ತು ಸೋದರಮಾವಂದಿರೊಂದಿಗೆ ಬೇಟೆಗೆಹೋದನು. ಒಂದು ಕಾಡು ಹಂದಿಯನ್ನು ಅವನು ಕಂಡು, ಅದನ್ನು ಅಟ್ಟಿಸಿಕೊಂಡು ಹೋಗಿ ತನ್ನ ಬರ್ಚಿಯಿಂದ ತಿವಿದು ಕೊಂದನು. ಆದರೆ ಆ ಪ್ರಾಣಿ ಸಾಯುವ ಮುನ್ನ ರೂಪಧರನನ್ನು ತನ್ನ ಕೊಂಬಿನಿಂದ ಬಲವಾಗಿ ತಿವಿಯಿತು. ಗಾಯವಾಸಿಯಾದರೂ ಮಚ್ಚೆ ಉಳಿಯಿತು.

ರೂಪಧರನ ಕಾಲು ತೊಳೆಯುವುದು ಪೂರ್ತಿಯಾದ ಕೂಡಲೇ ಪದ್ಮಮುಖಿ ಆತನೊಂದಿಗೆ "ಅಯ್ಯಾ, ನನಗೊಂದು ಕ್ಲಿಷ್ಟ ಸಮಸ್ಯೆಬಂದಿದೆ. ಇದುವರೆಗೆ ನನ್ನಮಗ ತೀರಾ ಚಿಕ್ಕವನಾಗಿದ್ದನು. ನನ್ನ ಸೆರಗು ಬಿಡುತ್ತಿರಲಿಲ್ಲ. ಆದರಿಂದ ನಾನುಮಾತ್ರ ವಿವಾಹವಾಗಿ ಈ ಮನೆಯಿಂದ ಹೊರಬೀಳಬೇಕಾದ ಅಗತ್ಯವಿರಲಿಲ್ಲ. ಆದರೀಗ ಅವನು ದೊಡ್ಡವನಾಗಿದ್ದಾನೆ. ಅವನಿಗೆ ಈಗ ನನಗಿಂತಲೂ ತನ್ನ ಆಸ್ತಿ ಹೆಚ್ಚು. ನನ್ನನ್ನು ಸ್ವಯಂವರ ಮಾಡಿಕೊಳ್ಳುವಂತೆ ನಿರ್ಬಂಧಿಸುತ್ತಿರುವ ರಾಜ



ಯಲ್ಲಿ ಎತ್ತಿನ ಚರ್ಮದಮೇಲೆ ಕುರಿಚರ್ಮ ವನ್ನು ಹರವಿಕೊಂಡು ಮಲಗಿದನು. ಬೆಳಗಾಗುವ ತನಕ ಪ್ರತೀಕಾರವನ್ನು ಯೋಚಿಸುತ್ತ ಹಗಲು ಹರಿದಕೂಡಲೇ ಎಚ್ಚರಗೊಂಡು ತನ್ನ ಹಾಸಿಗೆಯನ್ನು ಸುತ್ತಿ ಒಂದು ಪಕ್ಕದಲ್ಲಿಟ್ಟು ದೇವರಪ್ರಾರ್ಥನೆಮಾಡಿದನು.

ಹಂದಿಚೇಕನು ಮೂರು ಕೊಬ್ಬಿದ ಹಂದಿಗಳನ್ನು ಅಲ್ಲಿಗೆ ಅಟ್ಟಿಕೊಂಡು ಬಂದು ರೂಪಧರನನ್ನು ಕಂಡು "ಇಲ್ಲಿಯ ಪುಂಡರು ನಿನ್ನ ಬಗ್ಗೆ ಗೌರವದಿಂದ ವರ್ತಿಸಿದರೇ? ಇಲ್ಲ ಕರೆಕರೆ ಕೊಟ್ಟರೋ?" ಎಂದು ಕೇಳಿದನು.

"ಅವರಿಗೆ ಕೊಂಚವಾದರೂ ಅಭಿಮಾನ ವಿಲ್ಲ. ಪರರ ಮನೆಯಲ್ಲಿ ಕುಳಿತು ಹೀಗೆ ವರ್ತಿಸುವ ನೀಚರನ್ನು ದೇವರು ಖಂಡಿತವಾಗಿ ಶಿಕ್ಷಿಸುತ್ತಾನೆ" ಎಂದ ರೂಪಧರ.

ಅವರಿಬ್ಬರೂ ಮಾತನಾಡುತ್ತಿರಲು ಕಾಳ ಅಲ್ಲಿಗೆ ಬಂದನು. ತನ್ನ ಹೊಸ ಧಣಿಗಳ ಭೋಜನಕ್ಕೆ ಅವನು ಕೊಬ್ಬಿದ ಕುರಿಗಳನ್ನು ತಂದಿದ್ದನು. ಅವುಗಳನ್ನು ಹೊರಗೆ ಕಟ್ಟಿಹಾಕಿ, ಒಳಗೆ ಪ್ರವೇಶಿಸಿ, ರೂಪಧರನನ್ನು ಕಂಡು "ಎಲಾ, ಇನ್ನೂ ಇಲ್ಲೇ ಇರುವೆಯಾ? ತಿರುಪೆ ಬೇಡಲು ನಿನಗೆ ಈ ನಗರದಲ್ಲಿ ಬೇರೊಂದು ಮನೆ ಸಿಕ್ಕಲಿಲ್ಲವೇ?" ಎಂದು ಮೂದಲಿಸಿದನು. ರೂಪಧರನಿಗೆ ಅವನ ಧೋರಣೆ ಕಂಡು ಸಿಟ್ಟಾದರೂ ಅತ್ಯಂತ ಪ್ರಯಾಸದಿಂದ ಸಿಟ್ಟನ್ನು ನುಂಗಿಕೊಂಡು ಮೌನವಹಿಸಿದನು. ಆಗ ಅಲ್ಲಿಗೆ ಸುಖಪ್ರಾಪ್ತಿ ಎಂಬ ದನ

ಕುಮಾರರು ತನ್ನ ಸೊತ್ತನ್ನೆಲ್ಲಾ ಕರಗಿಸುತ್ತಿರುವುದನ್ನು ಕಂಡು ಮನೋವೇದನೆ ಪಡುತ್ತಿದ್ದಾನೆ. ಆದುದರಿಂದ ನಾನು ಮದುವೆ ಮಾಡಿಕೊಳ್ಳಲೇಬೇಕು. ನಾನೊಂದು ಉಪಾಯ ಯೋಚಿಸಿದ್ದೇನೆ. ನನ್ನ ಪತಿರಾಯರು ಹನ್ನೆರಡು ಕೊಡಲಿಗಳನ್ನು ಸಾಲಾಗಿ ಜೋಡಿಸಿಟ್ಟು ಅವುಗಳ ರಂಧ್ರದಲ್ಲಿ ತೂರಿಕೊಂಡು ಹೋಗುವಂತೆ ಬಾಣವನ್ನು ಬಿಡುತ್ತಿದ್ದರು. ನನ್ನ ಗಂಡನ ಬಿಲ್ಲನ್ನು ಬಗ್ಗಿಸಿ, ಹನ್ನೆರಡು ಕೊಡಲಿಗಳ ರಂಧ್ರದ ಮೂಲಕ ಬಿಣಬಿಡುವಾತನನ್ನು ಮದುವೆಯಾಗಲು ನಾನು ನಿಶ್ಚಯಿಸಿದ್ದೇನೆ" ಎಂದಳು.

ತರುವಾಯ ಆಕೆ ತನ್ನ ಕೊಠಡಿಗೆ ಹೋಗಿ ಮಲಗಿಕೊಂಡಳು. ರೂಪಧರನು ಪಡಸಾಲೆ



ಕಾಯುವವನು ಒಂದು ಗಬ್ಬವಾಗಿದ್ದ ಹಸುವನ್ನೂ, ಕೆಲವು ಮೇಕೆಗಳನ್ನೂ ಅಟ್ಟಿಕೊಂಡು ಬಂದನು. ಅವನು ರೂಪಧರನನ್ನು ಕಂಡು "ಈತನ್ಯಾರು? ಯಾವ ದೇಶದವನು?" ಎಂದು ಹಂದಿಚೇಕನನ್ನು ಕೇಳಿದನು. ಆ ವೃದ್ಧ ಬಿಕ್ಷುಕನನ್ನು ನೋಡಿದಕೂಡಲೇ ಅವನಿಗೆ ತನ್ನ ಯಜಮಾನ ರೂಪಧರನ ಜ್ಞಾಪಕವಾಯಿತು. ಅವನ ಕಣ್ಣಿಂದ ನೀರು ಸುರಿಯಿತು. "ಅಯ್ಯಾ ನಿನ್ನನ್ನು ನೋಡಿದರೆ ನಮ್ಮ ಯಜಮಾನರು ಜ್ಞಾಪಕಕ್ಕೆ ಬರುತ್ತಾರೆ. ಅವರೂ ಸಹ ನಿನ್ನಂತೆಯೇ ಹಳೆಯ ಅರಿವೆಗಳನ್ನು ಹಾಕಿಕೊಂಡು ದಿಕ್ಕೆಟ್ಟ ದೇಶಗಳಲ್ಲಿ ತಿರುಗಾಡುತ್ತಿರಬಹುದು. ಆ ಮಹಾರಾಯ ಎಂದಿಗಾದರೂ ಮನೆಗೆ ಹಿಂತಿರುಗಿ ಬಂದಾನೆಂಬ ಆಶೆಯಿಂದ ಜೀವಿಸಿದ್ದೇನೆ. ಇಲ್ಲದಿದ್ದರೆ ನಾನು ಈ ದುರುಳರ ಸೇವೆ ಒಂದು ದಿನವಾದರೂ ಮಾಡುತ್ತಿರಲಿಲ್ಲ" ಎಂದು ತನ್ನ ಅಳಲನ್ನು ತೋಡಿಕೊಂಡನು.

ರೂಪಧರನು ಅವನೊಂದಿಗೆ "ಅಪ್ಪಾ, ಭಯಪಡಬೇಡ. ನೀನಿಲ್ಲಿರುವಾಗಲೇ ನಿನ್ನ ಯಜಮಾನನು ಸ್ವದೇಶಕ್ಕೆ ಹಿಂತಿರುಗಿ ಈ ದುರುಳರಿಗೆ ಬುದ್ಧಿ ಕಲಿಸುತ್ತಾನೆ."

ಅತ್ತ ದುರುಳರೆಲ್ಲ ಒಂದುಕಡೆ ಸಭೆಸೇರಿ ಧೀರಮತಿಯನ್ನು ಕೊಲ್ಲಲು ಒಳಸಂಚು ನಡೆಸುತ್ತಿದ್ದರು. ಅವರಲ್ಲೊಬ್ಬನು "ಸಹೋದರರೇ, ನನಗೇಕೋ ಅಪಶಕುನಗಳು ಕಾಣಿಸುತ್ತಿವೆ. ಧೀರಮತಿಯ ಕೊಲೆಯವಿಷಯ ನಂತರ




ನೋಡೋಣ. ಈಗ ಊಟಮಾಡಲು ನಡೆಯಿರಿ" ಎಂದನು. ಎಲ್ಲರೂ ಎದ್ದು ಪಡಸಾಲೆಗೆ ಬಂದರು. ಕೆಲವರು ಅಲ್ಲಿ ಸಿದ್ಧವಾಗಿ ನಿಂತಿದ್ದ ಮೂಕಪ್ರಾಣಿಗಳನ್ನು ಕೊಂದು ಒಲೆಯಮೇಲಿಟ್ಟು ಬೇಯಿಸಲಾರಂಭಿಸಿದರು. ರೊಟ್ಟಿ, ಪಾನೀಯಗಳು ಬಂದುವು. ಎಲ್ಲರೂ ಊಟಕ್ಕೆ ಕುಳಿತರು.

ಬಾಗಿಲಪಕ್ಕದಲ್ಲಿ ರೂಪಧರನಿಗಾಗಿ ಧೀರಮತಿ ಒಂದು ಕುರ್ಚಿ ಮತ್ತು ಮೇಜು ಹಾಕಿಸಿದನು. ಅವನು ತನ್ನ ತಂದೆಯಮುಂದೆ ಆಹಾರಪಾನೀಯಗಳನ್ನು ಇಡಿಸಿ "ಹೊಟ್ಟೆ ತುಂಬಾ ಊಟಮಾಡು. ಯಾರೂ ನಿನ್ನನ್ನು ಪರಿಹಾಸ್ಯ ಮಾಡದಂತೆ ನೋಡಿಕೊಳ್ಳುತ್ತೇನೆ. ಇದು ನಡು ಬೀದಿಯಲ್ಲ. ನನ್ನ ತಂದೆಯ







ಮನೆ ಈಗ ನನ್ನ ಆಸ್ತಿಯಾಗಿದೆ. ಎಲ್ಲರನ್ನೂ ಮತ್ತೊಮ್ಮೆ ಕೇಳಿಕೊಳ್ಳುತ್ತೇನೆ. ಗದ್ದಲ ಮಾಡಿದರೆ ನಾನು ಸುಮ್ಮನಿರಲಾರೆ" ಎಂದು ಹೇಳಿದನು ದರ್ಪದಿಂದ.

ಧೀರಮತಿಯ ಭಾಷಣ ಕೇಳಿ ಎಲ್ಲರೂ ವಿಸ್ಮಿತರಾದರು. ದುರ್ಬುದ್ಧಿಮಾತ್ರ ತನ್ನ ಮಿತ್ರನೊಬ್ಬನಿಗೆ ಕಣ್ಣುಸನ್ನೆ ಮಾಡಿ "ಅವನ ಬೆದರಿಕೆ ಕೇಳಿದೆಯಷ್ಟೇ? ಇಂದು ಅವನ ಅದೃಷ್ಟ ಚೆನ್ನಾಗಿದೆ. ನಮಗಿಂದು ಅಪಶಕುನಗಳಾಗದಿದ್ದಿದ್ದರೆ ಅವನ ಬಾಯಿ ಮುಚ್ಚಿಸುತ್ತಿದ್ದೆ" ಎಂದನು. ಧೀರಮತಿಗೆ ಈ ಮಾತುಗಳು ಕೇಳಿಸಿದರೂ ಅವನು ಅದನ್ನು ಲಕ್ಷಿಸಲಿಲ್ಲ.

ಆ ದುರುಳರಲ್ಲಿ ಅಶ್ವನಿಪುಣನೆಂಬ ಜಂಬಗಾರನಿದ್ದನು. ಅವನು ತುಂಬಾ ಸ್ಥಿತಿವಂತ.



ಪದ್ಮಮುಖಿ ತನ್ನ ಸಂಪತ್ತನ್ನು ಕಂಡು ತನ್ನನ್ನು ವರಿಸುವಳೆಂಬ ಆಶೆಯಿಂದ ಅವನು ಬಹು ದೂರದೇಶದಿಂದ ಅಲ್ಲಿಗೆ ಬಂದಿದ್ದನು. ಅವನು "ಮಿತ್ರರೇ, ಈ ವೃದ್ಧಭಿಕ್ಷುಕನು ನಮ್ಮ ಸಮನಾಗಿ ಕುಳಿತು ತಿಂದು ತೇಗುತ್ತಿದ್ದಾನಲ್ಲವೇ? ಅವನನ್ನು ಇನ್ನೊಂದು ಮೆಟ್ಟಲು ಮೇಲಕ್ಕೆ ಕಳುಹಿಸೋಣ. ಅವನಿಗೆ ನಾನು ಕೊಡುವ ಉಡುಗೊರೆಯನ್ನು ನೋಡಿ" ಎಂದು ಒಂದು ಹಸುವಿನ ಗೊರಸನ್ನು ರೂಪಧರನ ಕಡೆಗೆ ಎಸೆದನು. ರೂಪಧರನು ತನ್ನ ತಲೆಯನ್ನು ಪಕ್ಕಕ್ಕೆ ಬಾಗಿಸಲು, ಹಸುವಿನ ಗೊರಸು ಗೋಡೆಗೆ ಬಿತ್ತು.

ಧೀರಮತಿ ವ್ಯಂಗ್ಯ ತುಂಬಿದ ಧ್ವನಿಯಲ್ಲಿ "ಅಶ್ವನಿಪುಣ, ನಿನ್ನ ಗುರಿ ತಪ್ಪಿತು. ಅತಿಥಿ ತನ್ನ ತಲೆಯನ್ನು ಒಂದು ಪಕ್ಕಕ್ಕೆ ವಾಲಿಸಿದುದನ್ನು ಕಂಡೆ. ಆತನಿಗೇನಾದರೂ ಏಟು ಬಿದ್ದಿದ್ದರೆ ನನ್ನ ಈಟಿ ನಿನ್ನ ಎದೆಯನ್ನು ಸೀಳುತಿತ್ತು. ನಾನು ನಿಮಗೆ ಮತ್ತೊಮ್ಮೆ ಎಚ್ಚರಿಕೆ ಕೊಡುತ್ತಿದ್ದೇನೆ. ನೀವೆಲ್ಲರೂ ಗಂಭೀರವಾಗಿ ನಡೆದುಕೊಳ್ಳಿರಿ. ಮನಬಂದಂತೆ ವರ್ತಿಸುತ್ತಾ, ನನ್ನ ಪಶುಗಳನ್ನು ಕೊಂದು ತಿನ್ನುತ್ತಾ, ಕುಡಿದು ಕುಣಿಯುತ್ತಾ ಇರುವುದನ್ನು ನಾನು ಸಹಿಸಲಾರೆ" ಎಂದನು.

ಕೊಂಚಹೊತ್ತು ಯಾರೂ ಮಾತನಾಡಲಿಲ್ಲ. ಕೊನೆಗೊಬ್ಬ "ಮಿತ್ರರೇ, ಆ ಭಿಕ್ಷುಕನ ಗೋಜಿಗೆ ಹೋಗಬೇಡಿ. ಧೀರಮತಿ, ನಿನ್ನಲ್ಲಿ ನಮ್ಮ ಕೋರಿಕೆ ಒಂದಿದೆ. ಅದೇ



ನಿಮ್ಮ ತಾಯಿಯು ಸ್ವಯಂವರ. ಅದು ನಡೆದ ನಂತರ ನಮಗಿಲ್ಲಿ ಕೆಲಸವಿರಲಾರದು. ಆಕೆ ಯಾಕೆ ಸ್ವಯಂವರವನ್ನು ಮುಂದೂಡುತ್ತಿದ್ದಾಳೆ? ಯಾರಿಗಾಗಿ ಎದುರು ನೋಡುತ್ತಿದ್ದಾಳೆ? ನಮ್ಮಲ್ಲಿ ಒಬ್ಬರನ್ನು ವಿವಾಹವೇಕಾಗಬಾರದು?" ಎಂದನು.

ಬಾಗಿಲಿಗೆದುರಾಗಿ ಆಸನದಮೇಲೆ ಕುಳಿತಿದ್ದ ಪದ್ಮಮುಖಿಗೆ ಅವರ ಸಂಭಾಷಣೆ ಕೇಳಿಸಿತು. ಆಕೆ ಪಕ್ಕನೆದ್ದು ತನ್ನ ಪತಿಯ ಕೋಣೆಗೆ ಹೋದಳು. ಆ ಕೋಣೆಯಲ್ಲಿ ರೂಪಧರನ ಧನುಸ್ಸು, ಬತ್ತಳಿಕೆಗಳಿದ್ದುವು. ಆ ಧನುಸ್ಸನ್ನು ಯಾರೋ ರೂಪಧರನಿಗೆ ಬಹುಮಾನವಾಗಿ ಕೊಟ್ಟಿದ್ದರು. ಪದ್ಮಮುಖಿ ಆ ಧನುಸ್ಸನ್ನು ಕೊಂಚಹೊತ್ತು ತನ್ನ ಮಡಲಲ್ಲಿಟ್ಟುಕೊಂಡು ಅತ್ತಳು. ತರುವಾಯ ಕಣ್ಣೀರೊರಸಿಕೊಂಡು ಧನುಸ್ಸನ್ನೂ, ಬತ್ತಳಿಕೆಯನ್ನೂ ತೆಗೆದುಕೊಂಡು ಕೆಳಗಿಳಿದು ಬಂದಳು. ನೌಕರರು ಕೊಡಲಿಗಳನ್ನು ಒಂದು ತಟ್ಟೆಯಲ್ಲಿಟ್ಟುಕೊಂಡು ಆಕೆಯನ್ನು ಹಿಂಬಾಲಿಸಿಕೊಂಡು ಬಂದರು.

ಪದ್ಮಮುಖಿ ಪಡಸಾಲೆಯ ಬಾಗಿಲಬಳಿ ನಿಂತು ಸೀರೆಯನ್ನು ತಲೆಯಮೇಲೆಳೆದುಕೊಂಡು ಹೀಗೆಂದಳು :

"ಎಲ್ಲರೂ ಶ್ರದ್ಧೆಯಿಂದ ಲಾಲಿಸಬೇಕು. ನನ್ನನ್ನು ವಿವಾಹವಾಗುವ ಬಯಕೆಹೊರತು ನಿಮ್ಮ ಅರ್ಹತೆಯೇನೋ ಯಾರೂ ನಮಗೆ ತಿಳಿಸಿಲ್ಲ. ನಿಮ್ಮ ಅರ್ಹತೆಯನ್ನು ಪ್ರದರ್ಶಿಸಿ




ನನ್ನನ್ನು ಬಹುಮಾನವಾಗಿ ಪಡೆಯಿರಿ. ಇದೋ ನನ್ನ ಪತಿಯ ಧನುಸ್ಸು. ನಿಮ್ಮಲ್ಲಿ ಯಾರು ಈ ಬಿಲ್ಲನ್ನು ಬಾಗಿಸಿ ಈ ಹನ್ನೆರಡು ಕೊಡಲಿಗಳ ತಲೆಯ ತೂತಿನಲ್ಲಿ ಬಾಣವನ್ನು ಬಿಡುವರೋ ಅಂತಹ ವೀರಪ್ರವರರನ್ನು ನಾನು ವಿವಾಹವಾಗುವೆನು."

ಹಾಗೆಂದು ಹೇಳಿ ಆಕೆ ಹಂದಿಚೇಕನನ್ನು ಕೂಗಿ ಅವನ ಕೈಗೆ ಧನುಸ್ಸು ಮತ್ತು ಕೊಡಲಿಯ ತಲೆಗಳನ್ನು ಕೊಟ್ಟು, ಎಲ್ಲರಿಗೂ ತೋರಿಸುವಂತೆ ಹೇಳಿದಳು.

ಅವುಗಳನ್ನು ಕೈಗೆ ತೆಗೆದುಕೊಂಡಾಗ ಹಂದಿಚೇಕನು ಕಂಬನಿ ಸುರಿಸಿದನು. ದೂರದಲ್ಲಿ ನಿಂತು ನೋಡುತ್ತಿದ್ದ ಸುಖಪ್ರಾಪ್ತಿಗೂ ಸಹ ದುಃಖ ತಡೆಯಲಾಗಲಿಲ್ಲ. ದುರ್ಬುದ್ಧಿ

ಅವರನ್ನು ನೋಡಿ ಅಸಹ್ಯಪಟ್ಟುಕೊಂಡು "ಹೆಂಗಸರಂತೆ ಹಾಗೇಕೆ ಅಳುತ್ತಿರುವಿರಿ. ತಿನ್ನಬೇಕಾದರೆ ಕುಳಿತು ತಿನ್ನಿ. ಅಳುವಂತಿದ್ದರೆ ಹೊರಗೆ ಹೋಗಿ ಅಳಬೇಕು. ನಮಗಿಲ್ಲಿ ಬಹುಮುಖ್ಯ ಕೆಲಸವಿದೆ. ಏಕೆಂದರೆ ಈ ಬಿಲ್ಲು ಬಾಗಿಸುವುದು ಸುಲಭವಾದ ಕಾರ್ಯವಲ್ಲ. ರೂಪಧರನಂತಹ ಬಲಿಷ್ಠರು ಇಲ್ಲಿ ಯಾರೂ ಇಲ್ಲ. ನಾನು ಚಿಕ್ಕಂದಿನಲ್ಲಿ ಆತನನ್ನು ಕಂಡಿದ್ದೆ" ಎಂದನು.

ಔಪಚಾರಿಕವಾಗಿ ಅವನು ಹಾಗೆ ಹೇಳಿದ್ದರೂ, ತಾನು ಆ ಬಿಲ್ಲು ಬಗ್ಗಿಸಿ, ಬಾಣವನ್ನು ಕೊಡಲಿಗಳ ತಲೆಯನ್ನು ತೂರಿಕೊಂಡು ಹೋಗುವಂತೆ ಬಿಡಬಲ್ಲೆನೆಂದು ಅವನಲ್ಲಿ ಆತ್ಮವಿಶ್ವಾಸವೊಂದು ತಲೆಯಾಡಿಸಿಕೊಂಡಿತ್ತು.

ಧೀರಮತಿಗೆ ಹುಚ್ಚು ಆವೇಶಬಂದಿತು. "ಓಹೋ, ನಮ್ಮ ತಾಯಿ ಮದುವೆಯಾಗಿ ತನ್ನ ಅತ್ತೆಯ ಮನೆಗೆ ಹೋಗುವ ಸಮಯ ಬಂತು. ನಾನು ಹುಚ್ಚನಂತೆ ನೋಡಿಕೊಂಡು ಸುಮ್ಮನಿದ್ದೇನೆ. ನಮ್ಮ ತಾಯಿಯಂಥ ಸ್ತ್ರೀರತ್ನ ಪ್ರಪಂಚದಲ್ಲೇ ಇಲ್ಲ. ಆದರೆ ನಾನು ಆ ಮಾತು ಹೇಳಿ ಪ್ರಯೋಜನವೇನು? ಎಲ್ಲಿ, ಆ ಧನುಸ್ಸನ್ನು ಇತ್ತ ಕೊಡಿ. ಅದನ್ನು ಎತ್ತಲಿಕ್ಕಾದರೂ ಶಕ್ತಿಯಿರುವುದೇನೋ ನೋಡುತ್ತೇನೆ" ಎಂದು ಅವನು ಎದ್ದು ಕೊಡಲಿಯ ತಲೆಗಳನ್ನು ಕ್ಷಣಮಾತ್ರದಲ್ಲಿ ಜೋಡಿಸಿ, ತರುವಾಯ ಧನುಸ್ಸನ್ನು ನೆಲದಮೇಲೆ ನಿಲ್ಲಿಸಿ, ಅದಕ್ಕೆ ಹಗ್ಗ ತಗಲಿಸಲು ಮೂರುಬಾರಿ ಪ್ರಯತ್ನಮಾಡಿದ. ಇನ್ನೊಂದಿಷ್ಟು ಪ್ರಯತ್ನ ಮಾಡಿದ್ದಿದ್ದರೆ ಆ ಹಗ್ಗವನ್ನು ತಗುಲಿಸಬಲ್ಲೆನೆಂಬ ಆತ್ಮವಿಶ್ವಾಸವಿತ್ತು.

ಆದರೆ ರೂಪಧರನು ಬೇಡವೆಂದು ಅವನಿಗೆ ಕಣ್ಣುಸನ್ನೆ ಮಾಡಿದನು. ಆಗ ಧೀರಮತಿ "ಊಹುಂ. ನಾನಿನ್ನೂ ಹುಡುಗ. ಯಾವುದಕ್ಕೂ ಕೆಲಸಕ್ಕೆ ಬಾರದವನು. ನನಗೆ ಅನುಭವವೂ ಕೂಡ ಸಾಲದು. ಇಲ್ಲಿ ಹಿರಿಯರೆಲ್ಲರೂ ಸಭೆಸೇರಿರುವಿರಿ. ನಿಮ್ಮ ನಿಮ್ಮ ಪರಾಕ್ರಮವನ್ನು ಪ್ರದರ್ಶಿಸಿ, ನೋಡೋಣ" ಎಂದನು.

[ ಇನ್ನೂ ಇದೆ ]






ಘೂಕಮಂತ್ರಿ ಪ್ರಾಕಾರಕರ್ಣನದು
ಪೇಳಿತಿಂತು : ' ಸ್ಥಿರಜೀವಿಯನು
ರಕ್ಷಿಪುದೇ ಮೇಲ್. ಇದು ಪೇಳಿದೆ ಕಾ
ಗೆಗಳೊಳು ಜರುಗಿದ ಮರ್ಮವನು.

ಈತನ ಮರ್ಮವ ನಾವೂ ಅರಿಯುತೆ
ಭೇದಿಸಬಹುದಾ ಶತ್ರುವನು.
ಕಥೆಯೊಂದಿದೆ ಕೇಳಿರಿ, ಹಿಂದಿದ್ದನು
ರಾಜಕುಮಾರನು, ಅಭಾಗ್ಯನು.

ಆತನ ಉದರದಿ ಹಗ್ಗದ ಹಾಗಿನ
ಹಾವೊಂದೆಂತೋ ಹೊಕ್ಕಿತ್ತು !
ಎನಿತೋ ವೈದ್ಯರು ಎನಿತೋ ಮಾಡಿದ
ರನಿತೂ ನಿಷ್ಫಲವಾಗಿತ್ತು.

ಬಾಧೆಯ ತಾಳದೆ ತಿಂದುದು ಕರಗದೆ
ರೋಗದಿ ಬುದ್ಧಿಯೆ ಮಂದಾಯ್ತು.
ಇದ್ದಲ್ಲಿರದೂರೂರನು ತಿರುಗುತ
ಸವೆದನು, ರೂಪ ವಿಕಾರಾಯ್ತು.

ತಿರುಗಿ ಯಾವುದೋ ದೇಶದ ಛತ್ರದಿ
ತಂಗಿರಲೊಂದು ವಿಚಿತ್ರಾಯ್ತು !
ಆ ದೇಶದ ರಾಜನ ಕೋಪವು ನಿಜ
ತನಯಳ ಮೇಲೆಯೆ ಬಿದ್ದಿತ್ತು !

ತಂದೆಗಾ ಮಗಳು ಹಿತಮಿತ ಭೋಜನ
ಮಾಡಿರೆಂದುದೇ ತಪ್ಪಾಯ್ತು !
ತನಗೇ ಬುದ್ಧಿಯ ಪೇಳ್ವ ಕುಮಾರಿಯ
ಕೈಲಾಗದ ದೀನನಿಗಿತ್ತು

ಮದುವೆ ಮಾಡಿಬಿಡು, ಎಂದು ಮುಖ್ಯಮಂ
ತ್ರಿಗೆ ರಾಜನ ಅಪ್ಪಣೆಯಾಯ್ತು !
ಮಂತ್ರಿ ಹುಡುಕುತಾ ಛತ್ರದಿ ತಂಗಿದ
ನಾಗರೋಗದ ಕುಮಾರನಿಗೇ

ರಾಜಕುಮಾರಿಯ ಪಾಣಿಗ್ರಹಣವ
ಮಾಡಿಸಿ ಪೋದನು ಅರಮನೆಗೆ.
ಪತ್ನಿಯೊಂದಿಗಾ ರಾಜಕುಮಾರನು
ನಡೆಯುತಿರಲು ಕಾಲೊಯ್ದೆಡೆಗೆ;

ಮಾರಂಗ



ಅವಳೂ ಬೇಸರಿಸದೆ ಗಂಡಗೆ ಸಹ
ಕರಿಸುತೆ ನಡೆದಳು ಅಡಿಗಡಿಗೆ.
ಒಂದೆಡೆ ಪತಿಯನು ಮಲಗಿಸಿಯಾ ಸತಿ
ಪೋದಳು ಜೀನಸಿನಂಗಡಿಗೆ

ನಿದ್ರಿಸಿದಾತನ ಉದರದ ಒಳಗಿನ
ಹಾವು ಮೆಲ್ಲ ಬಂದಿತು ಹೊರಗೆ!
ಪಕ್ಕದಲಿದ್ದಾ ಹುತ್ತದ ಹಾವೊಂ
ದೆದ್ದು ಬಂದಿತೀ ಹಾವೆಡೆಗೆ

" ಛೀ! ನಿಕೃಷ್ಟ! ಈ ರಾಜಕುಮಾರನ
ಪೀಡಿಸಿ ಬದುಕುವೆ ಹಾಳ್‌ಬದುಕು!"
ಎಂದದು ಜರೆಯಲು, ಈ ಹಾವಂದಿತು:
'ನಿನ್ನ ಬದುಕೆ ಬರಿಹಾಳ್ ಬದುಕು!

ಹುತ್ತದ ನಿಧಿಯನು ಅನ್ಯರಿಗೂ ಕೊಡೆ,
ತಾನೂ ಉಣ್ಣದ ಹಾಳ್ ಬದುಕು!"
ಭುಸಿಯುತೆ ಆ ಹಾವಂದಿತು: 'ಛೀ ನಡೆ!
ಬಲ್ಲೆ ನಿನಗೀವ ಸಾವ್ ಗುಟುಕು!

ಸಾಸಿವೆ ಜೀರಿಗೆ ಅರೆದು ಕುಡಿಸಿದರೆ
ನಿನ್ನ ಜೀವ ಹಾರ್ವುದು ಪಟಕು!'
ಹುತ್ತದ ಹಾವಿಗೆ ಮಾರ್ನುಡಿ ಕೊಟ್ಟಿತು:
'ನಾನೂ ಬಲ್ಲೆನು ನಿನ್ನೊಡಕು!

ಕುದಿನೀರಿಗೆ ಕುದಿಯೆಣ್ಣೆಯ ಸೇರಿಸಿ
ಹುತ್ತಕೆ ಸುರಿದರೆ ತೀರಿತಲಾ!
ನೀ ಸಾಯುವೆ, ನಿನ್ನೆಲ್ಲಾ ನಿಧಿಯೂ
ನಿನ್ನ ಕೊಂದವನ ಸೇರ್ವುದಲಾ!'

ಹೀಗಾ ಹಾವ್ಗಳ ಮರ್ಮದ ಮಾತನು
ಅಡಗಿ ಕೇಳಿದಳು ಸತಿಯವಳು!
ಜೀನಸಿನೊಂದಿಗೆ ಬಂದವಳಾಗಲೆ
ಕಂಡಾ ಹಾವ್ಗಳ ಹೊಂಚಿದಳು.

ಕೇಳಿದಂತೆಯೇ ಔಷಧ ಕೊಟ್ಟಳು;
ಗಂಡನ ರೋಗವು ಗುಣವಾಯ್ತು!
ಆಲಿಸಿದಂತೆಯೆ ಮಾಡಲು ಹುತ್ತದ
ನಿಧಿಯನಿತವರಿಗೆ ವಶವಾಯ್ತು!

ಈ ಕಥೆಯಂತೀ ಕಾಗೆಯು ಕಾವುದೆ
ಸೂಕ್ತವೆಂಬೆ ನಾನಿಂತು."
ಆಗೆಂದಿತು ಸ್ಥಿರಜೀವಿಕಾಗೆಯದು
'ಏಕೆ ಸಂದೇಹ ನಿಮಗಿಂತು?

ನಿಮಗಾಗೇ ನಾನೀಗತಿಯಾದೆನು ;
ಕೊಂದೇ ಹಾಕಿರಿ ನೀವೆನ್ನ.
ಗೂಗೆಯಾಗಿಯೇ ಮರಳಿ ಹುಟ್ಟಿ ಈ
ಹಗೆಯ ತೀರಿಪೆನು ನಾನೆನ್ನ !'

ಘೂಕಮಂತ್ರಿ ರಕ್ತಾಕ್ಷ ಪೇಳಿತದು
'ಅಲ್ಲದೆ ನಂಬುವುದೆಂತೆಂಬೆ ?
ಅವರವರ ಜಾತಿ ಅವರವರಿಗೆ ಹಿರಿ
ದಿಲಿಗೆ ಇಲಿಯೆ ನಂಟೇನೆಂಬೆ?

ಇಲಿಯು ಮದುವೆಗಾ ಸೂರ್ಯನ ನೋಡಲು
ಸೂರ್ಯನ ಮೇಘವು ಮುಚ್ಚಿತ್ತು ;
ಮೇಘವ ಪವನವು ಓಡಿಸೆ, ಪವನವ
ಗಿರಿತಡೆಯಿತು, ಒಳಗಿಲಿಯಿತ್ತು !

ಕಡೆಗಿಲಿಯನು ಇಲಿ ಕೂಡಿದ ಹಾಗೆಯೆ
ಕಾಗೆ ಕಾಗೆಯನೆ ಸೇರೀತು !
ರಕ್ತಾಕ್ಷನ ಈ ಮಾತಿಗೆ ಬಹುಮತ
ಬಾರದೆ, ಕಾಗೆಗೆ ಗೆಲುವಾಯ್ತು.

ಘೂಕರಾಜನದ ನಿಜಗುಹೆಗೊಯ್ದನು ;
ಪ್ರೀತಿಯಿಂದ ತಿನಲಿಡಿಸಿದನು.
ತಮ್ಮೊಳು ಸೇರದೆ, ಕಾಣುವ ಕಾಗೆಯ
ಕಂಡು ರಕ್ತಾಕ್ಷ ಪೇಳಿದನು :

'ದೊರೆಯೇ ಎನ್ನಯ ನುಡಿಯನಾಲಿಸದೆ
ಹಗೆಯನೆ ಮನೆಯೊಳು ಪುಗಿಸಿದನು !
ಹಿಂದೊಂದಿದ್ದಿತು ಚಿತ್ರಪಕ್ಷಿಯದು
ಇಡುವುದು ಚಿನ್ನದ ಹಿಚಿಕೆಯನು





ಬೇಡನೋರ್ವನ ಶಿರಸ್ಸಿಗೆ ಬಿದ್ದಿತು
ಹೊಳೆಯುವದರ ಚಿನ್ನದ ಹಿಚಿಕೆ
ಬಲೆಯನೊಡ್ಡಿಯಾ ಹಕ್ಕಿಯ ಕೈಕೊಂ
ಡೊಯ್ದನು ತನ್ನಯ ಗುಡಿಸಲಿಗೆ

ದಿನವೂ ಚಿನ್ನವು ತುಂಬಲವನಿಗೆ ಭಯ
ವಾಯಿತು, ದೊರೆ ಹಿಡಿಯುವನೆಂದು
ಹಕ್ಕಿಯನೊಯ್ದಾ ರಾಜಗೆ ಕೊಡುವುದೆ
ಉತ್ತಮವೆಂದೇ ತಿಳಿದಂದು;

ರಾಜನರಮನೆಗೆ ಹಕ್ಕಿಯನೊಯ್ದನು
ಪೇಳಿ ವಿಶೇಷವನದನಿತ್ತು
ತನ್ನ ಪಾಡಿಗೇ ತಾತೆರಳಿದನವ.
ಮಂತ್ರಿಯೆಂದ ರಾಜನಿಗಿಂತು:

'ಬೇಡನ ಮಾತನು ನಂಬೀ ಅಲ್ಪದ
ಹಕ್ಕಿಯ ಹಿಚಿಕೆಯ ಮುಟ್ಟುವುದೆ?'
ಹೌದೆನುತರಸನು ಹಕ್ಕಿಯ ಬಿಟ್ಟನು;
ನಕ್ಕಿತು—ನೋಡಲು ಹಕ್ಕಿಯದೇ!

ನಗುತಲಿ ಹೇಳಿತು: 'ತಿಳಿದೇ ಬೇಡನ
ಬಲೆಗೆ ಬಿದ್ದವನೆ ನಾ ಮೂರ್ಖ;
ಸಿಕ್ಕಿದ ನಿಧಿಯನು ತಾನೇ ತಂದೀ
ರಾಜಗಿತ್ತನೆರಡನೆ ಮೂರ್ಖ;

ರಾಜಗೆ ಯೋಚನೆ ಪೇಳಿದ ಮಂತ್ರಿಯೆ
ಮೂರನೆಯೊಬ್ಬನು ಬಲುಮೂರ್ಖ!
ಮಂತ್ರಿಯ ಮಾತನು ಕಣ್ಮುಚ್ಚಾಲಿಪ
ರಾಜನೆ ನಾಲ್ಕನೆ ಶತಮೂರ್ಖ!'

ಎಂದು ಹೋಯಿತದು; ನಮ್ಮಾರಾಜನು
ವೈರಿಯ ದುರ್ಗದೊಳಿರಿಸಿಹನು.
ಆಪತ್ತೊದಗುವ ಮೊದಲೇ ತಕ್ಕುದ
ಮಾಡಬೇಕು, ಯೋಚಿಸಿರಿದನು.

ಈಗಲೆ ಚಿಂತಿಸಿ ಬರುವ ಅಪಾಯಕೆ.
ಜಾಗ್ರತೆ ವಹಿಸುವ ನಾವಿನ್ನು.
ತೀರಾ ತಲೆಮೇಲ್ ಜರಿದು ಬೀಳುತಿರೆ
ಆಗ ತಡಕಾಡಿ ಫಲವೇನು?'

ಹೀಗೆನ್ನುತ ರಕ್ತಾಕ್ಷ ತನ್ನವರ
ಕರೆದು ಬೇರೊಂದು ತಾಣವನು
ಸೇರಿ ರಹಸ್ಯದಿ, 'ಕೇಳಿರಿ' ಎನ್ನುತೆ
ತೊಡಗಿತು ತನ್ನಯ ಕಥನವನು:



# ಪ್ರಕೃತಿಯ ಸೋಜಿಗಗಳು

## 4

ವಿಶ್ರಾಂತಿ ತೆಗೆದುಕೊಳ್ಳುತ್ತಿರುವಾಗ ನನಗೆ ಕೂಡಾ ಮೀನುಗಳ ಬೇಟೆಯಾಡಬೇಕೆಂದು ಮನಸ್ಸಾಯಿತು. ನಾನು ಕುಮೇವಾವಾನಿಗೆ ಹಿಂದೆ ಬಂದು ಹುಟ್ಟು ಹಾಕುವಂತೆ ಹೇಳಿ ಮುಂದು ಭಾಗಕ್ಕೆ ಹೋದೆ. ದೊಡ್ಡ ಮೀನಾಗಿಯೇ ಹಿಡಿಯೋಣವೆಂದುಕೊಂಡು ಕೊಂಡಿ ಕೋಲನ್ನು ಕೈಗೆತ್ತಿಕೊಂಡೆ.

ತೆಪ್ಪ ಆಚೀಚೆ ಊಗಾಡುತಿದ್ದುದರಿಂದ ನನಗೆ ತೂಕವಾಗಿ ನಿಲ್ಲಲಿಕ್ಕೇ ಆಗಲಿಲ್ಲ. ಎರಡು ಮೂರುಬಾರಿ ನೀರಿಗೇ ಬಿದ್ದು ಹೋಗುವ ಹಾಗಾಯಿತು. ಆದರೆ ಸ್ವಲ್ಪ ಹೊತ್ತಿನಲ್ಲಿ ನಿಲ್ಲುವ ತೂಕ ಮೈಗೆ ಹಿಡಿಯಿತು. ಮೀನನ್ನು ಹುಡುಕುತ್ತ ನೀರಿನೊಳಗೇ ಗುರಿಯಿಟ್ಟೆ. ಅನುಭವವಿಲ್ಲದ ನನ್ನ ಕಣ್ಣುಗಳಿಗೆ ನೀರಿನಲ್ಲಿರುವ ಕಲ್ಲುಗಳೂ, ಗಿಡ ಮರಗಳ ಅಡಿಭಾಗಗಳೂ ಮೀನಿನ ಭ್ರಮೆಯನ್ನೆ ಹಿಡಿಸುತಿದ್ದುವು.

ಕಟ್ಟಕಡೆಗೆ ನನ್ನ ಕಣ್ಣಿಗೆ ಮೀನಿನಂತೆ ನಂಬುಗೆಯಾದೊಂದು ತೋರಿತು. ಅದು ಎಡಗಡೆಗೆ ತಪ್ಪಿಸಿಕೊಂಡು ಹೋಗುವಹಾಗಿತ್ತು. ತೆಪ್ಪವನ್ನು ಆ ಕಡೆಗೇ ತಿರುಗಿಸುವಂತೆ ಹುಡುಗನಿಗೆ ಸನ್ನೆಮಾಡಿದೆ. ತೆಪ್ಪ ಅದನ್ನು ಸಮೀಪಿಸಿತು. ನಮ್ಮ ಬುಡದಲ್ಲೇ ಆದಿತ್ತು. ನಾನು ನನ್ನ ನರಗಳನ್ನೆಲ್ಲಾ ಬಿಗಿಮಾಡಿಕೊಂಡು ಕೊಂಡಿಕೋಲನ್ನೆತ್ತಿ ಪೂರಾಬಲದಿಂದ ಅದರ ಕಡೆಗೆಸೆದೆ. ಮೀನು ತಪ್ಪಿಹೋಗುವುದೇನೋ ಎಂಬ ಆತುರದಲ್ಲಿ ಕೂಡಲೇ ನಾನು ಕೊಂಡಿಯ ಹಗ್ಗವನ್ನು ಹಿಡಿದುಕೊಂಡೆ.

ಕೋಲಿನ ಕೊಂಡಿ ಮೀನಿಗೆ ಚುಚ್ಚಿಕೊಳ್ಳುವುದು ನನಗೆ ಸ್ಪಷ್ಟವಾಗಿ ಕಂಡಿತು. ಅಷ್ಟರಲ್ಲೇ ಬಲವಾದೊಂದು 'ಷಾಕ್' ತಗಿಲಿ ನೆತ್ತಿಮೇಲೆ ಹೊಡೆತ ಬಿದ್ದವನ ಹಾಗೆ ನಾನು ತೆಪ್ಪದೊಳಗೆ ಬಿದ್ದು ಹೋದೆ. ಈ ಆಕಸ್ಮಿಕವಾದ ಆದುರಿಕೆಯಿಂದ ನಾನು ಎಚ್ಚರವಾಗು

ತಿಬೋರ್ ಸೆಕೆಲ್ಯ್




ವಾಗ ಕುಮೇವಾವಾ ತನ್ನ ಹೊಟ್ಟೆ ಹಿಡಿದುಕೊಂಡು ಬಿಕ್ಕಿಬಿಕ್ಕಿ ನಗುತಿದ್ದನು.

"ಅದು ಮಿಂಚು ಬುಕ್ಕಡ ಅಂತ ಸ್ನೈಕುಚಾಪ್‌ಗೆ ಗೊತ್ತಿಲ್ಲಾಂತ ಕಾಣುತ್ತೆ. ಅನುಭವದಿಂದ ತಿಳಿದುಕೊಳ್ಳಬೇಕು. ಹಾಗೆ ಕಲಿತು ಕೊಂಡದ್ದು ಎಂದಿಗೂ ಜ್ಞಾಪಕವಿರುತ್ತೆ" ಎಂದ ವಾವಾ.

(ಬುಕ್ಕಡವೆಂಬುದು ಹಾವಿನ ಜಾತಿಯ ಮೀನು. ಈ ಮೀನುಗಳ ಕೆಲವು ಜಾತಿಯಲ್ಲಿ ವಿದ್ಯುಚ್ಛಕ್ತಿಯಿರುತ್ತದೆ. ಇವುಗಳಿಗೆ ಇಂಗ್ಲಿಷಿನಲ್ಲಿ 'ಎಲೆಕ್ಟ್ರಿಕ್ ಈಲ್' ಅನ್ನುತ್ತಾರೆ)

"ನೀನು ಬಹಳ ತುಂಟ ಕುಮೇವಾವಾ. ನನಗೆ ಹೇಳಬೇಕಿತ್ತು" ಎಂದೆ. ಆಗಲೇ ಆತ ಹಗ್ಗವನ್ನು ಹಿಡಿದುಕೊಂಡು ಮೀನನ್ನು ಸೇದತೊಡಗಿದ. ಕೊಂಡಿಕೋಲಿಗೆ ಸಿಕ್ಕಿಕೊಂಡಿರುವ ಸಪೂರ ಶರೀರವುಳ್ಳ ಮೀನೊಂದು ಮೇಲಕ್ಕೆ ಬಂತು. ಅದರ ನೀಳ ಎರಡು ಗಜಕ್ಕಿಂತಲೂ ಹೆಚ್ಚಿಗೇ ಇತ್ತು.

"ನನ್ನ ಹಾಗೇ ನೀನುಕೂಡಾ ಈ ಒದ್ದೆಯಾದ ಹಗ್ಗವನ್ನು ಕೈಯಲ್ಲಿ ಹಿಡಿದುಕೊಂಡಿರುವೆಯಲ್ಲಾ; ನಿನಗೇಕೆ ಷಾಕ್ ತಗಲಲಿಲ್ಲ?" ಎಂದು ಕೇಳಿದೆ.

"ಪಾಪ, ಇದರ ದೇಹದಲ್ಲಿದ್ದ ಮಿಂಚೆಲ್ಲಾ ಸ್ನೈಕುಚಾಪೇ ತೆಗೆದುಕೊಂಡುಬಿಟ್ಟ; ಕುಮೇವಾವಾನಿಗೇನೂ ಉಳಿದಿಲ್ಲ" ಎಂದನವ ಗಟ್ಟಿಯಾಗಿ ನಗುತ್ತ.

ಆ ಮೀನನ್ನು ತೆಪ್ಪದೊಳಗೆ ಸೇರಿಸಲು ಬಹಳ ಕಷ್ಟವಾಯಿತು. ಅದು ಸ್ವಸಂರಕ್ಷಣೆಗಾಗಿಯೋ ಅಥವಾ ತೆಪ್ಪವನ್ನು ತಲೆಕೆಳಗೆ ಮಾಡಲಿಕ್ಕಾಗಿಯೋ ಬಹಳ ಚಡಪಡಿಸುತ್ತಿತ್ತು. ಕಟ್ಟಕಡೆಗೆ ಅದರ ಕದಲಿಕೆ ನಿಂತಿತು. ಆ ಮೀನನ್ನು ಹಿಡಿದುದಕ್ಕೆ ನಾನು ಬಹಳ ಗರ್ವಪಟ್ಟೆ. ಬಿದ್ದು ಹೋದ ಅವಮಾನದ ಸಂಗತಿಯನ್ನೂ ಮರೆತುಬಿಟ್ಟೆ. ಎಷ್ಟು ದೊಡ್ಡ ಮೀನು ಹಿಡಿದೆನೆಂದು ಸ್ನೇಹಿತರೊಡನೆ ಜಂಬ ಹೊಡೆಯಲು ತವಕಗೊಂಡೆ.

ಹೀಗೆ ಯೋಚಿಸುತ್ತ ಆ ಮೀನಿಗೆ ಚುಚ್ಚಿಕೊಂಡಿರುವ ಗಾಳವನ್ನು ಎಳೆಯಲು ಪ್ರಯತ್ನ ಮಾಡಿದೆ. ಅದು ಸುಮ್ಮನೆ ಬಾಧೆಪಡುವುದು ನನಗಿಷ್ಟವಿಲ್ಲ. ಗಾಳವನ್ನೆಳೆದು ಮೀನನ್ನು ಬಿಡುಗಡೆಮಾಡಿದೆ. ಅದೇ ಸಮಯದಲ್ಲಿ ಆ

ಮೀನು ನನ್ನನ್ನು ಬಾಲದಿಂದ ಹೊಡೆದು ತೆಪ್ಪದಿಂದ ಎಗಿರಿ ಬುಳುಕ್ಕನೆ ನೀರಿನೊಳಗೆ ಬಿದ್ದುಹೋಯಿತು. ಅದನ್ನು ಮತ್ತೆ ಹಿಡಿಯೋಣವೆಂದು ನಾನು ನೀರಿಗೆ ಕೈಹಾಕುವಷ್ಟರಲ್ಲಿ ಹುಡುಗ ತಟ್ಟನೆ ಮುಂದೆಹಾರಿ ನನ್ನ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡ.

"ಕೈ ನೀರಿಗೆ ಹಾಕಿದರೆ ಅಪಾಯ! ಪಿರನ್ಯಾಗಳು ಬರುತ್ತವೆ!" ಎಂದನವ.

ಅವನಂದಂತೆಯೇ ಆ ಕ್ಷಣದಲ್ಲೇ ನೂರಾರು ಪಿರನ್ಯಾ ಮೀನುಗಳು ಬಂದುವು. ನೋಡುತ್ತಿರುವ ಹಾಗೆ ಅವು ಸಾವಿರಾರಾದುವು. ಈ ಪಿರನ್ಯಾಗಳನ್ನು ಕುರಿತು ನಾನು ಕೇಳಿದ್ದುಂಟು; ನೋಡುವುದು ಇದೇ ಮೊದಲನೇಸಾರಿ. ಅವು ನಮ್ಮ ಹಸ್ತದಷ್ಟೇ ಉದ್ದವಿರುತ್ತವೆ. ಮುಖ ಬಹಳ ಚಿಕ್ಕದು. ಹದನಾದ ಹರಿತವಾದ ಹಲ್ಲುಗಳಿರುತ್ತವೆ. ರಕ್ತ ಕಾಣುತ್ತಲೇ ಅವು ಓಡಿ ಬರುತ್ತವೆ. ರಕ್ತದ ಬಣ್ಣವಾಗಲೀ, ವಾಸನೆಯಾಗಲೀ ಕಂಡಿತೆಂದರೆ ಅವು ಶರ ವೇಗದಿಂದ ಬರುತ್ತವೆ. ಗಾಯವಾದ ಜಂತು ಮನುಷ್ಯನಾದರೂಸರಿ, ಮೃಗವಾದರೂಸರಿ, ಮುತ್ತಿಗೆ ಹಾಕಿ ಕೊರೆದು ಕೊರೆದು ತಿನ್ನಲಾರಂಭಿಸುತ್ತವೆ.

ನಾನು ಹಿಡಿದ ಆ ಮೀನಿಗಾಗಿ ಸೇರಿದ ಪಿರನ್ಯಾಗಳು ಪಂದ್ಯಹಾಕಿಕೊಂಡಹಾಗೆ ಅದನ್ನು ತಿನ್ನತೊಡಗಿದುವು. ಹಿಡಿಯುವ ಆತುರದಲ್ಲಿ ಕೆಲವು ನೀರಮೇಲೆ ಹಾರಿಹಾರಿ ಬೀಳುತ್ತಿದ್ದುವು. ಅವುಗಳ ಸಂಕ್ಷೋಭೆಯಿಂದ



ಅಲ್ಲಿಯ ನೀರೆಲ್ಲಾ ಕೆಂಪಾಗಿ ನೊರೆನೊರೆಯಾಯಿತು. ಈ ಭಯಂಕರ ದೃಶ್ಯವು ಒಂದೇ ನಿಮಿಷದಲ್ಲಿ ಮಾಯವಾಯಿತು. ಆನಂತರ ನೀರು ತಿಳಿಯಾಯಿತು. ನನ್ನ ಆ ನಿರ್ಭಾಗ್ಯ ಮೀನಿನ ಅಸ್ಥಿಪಂಜರವು ಬೆಳ್ಳಗೆ ನೀಳವಾಗಿ, ಒಂದು ಚೂರುಮಾಂಸವೂ ಇಲ್ಲದೆ ನೀರಮೇಲೆ ತೇಲತೊಡಗಿತು.

"ನಾನು ನೀರಿಗೆ ಕೈಹಾಕದಂತೆ ತಡೆದು ನನ್ನನ್ನು ಕಾಪಾಡಿದಿ ವಾವಾ. ಇಲ್ಲದಿದ್ದರೆ ನನ್ನ ಗತಿ ಏನಾಗುತಿತ್ತೋ!" ಎಂದೆ.

"ನೀರಿನಲ್ಲಿ ಪಿರನ್ಯಾಗಳ ಭಯವಾದರೆ, ನೆಲದಲ್ಲಿಯೂ ನೀರಿನಲ್ಲಿಯೂ ದುಷ್ಟ ಮನುಷ್ಯರ ಭಯ ಅಂತ ಮಲೋವಾತಾತ ಹೇಳುತ್ತಾನೆ" ಎಂದ ಹುಡುಗ.

ನಾನು ಆಲೋಚನೆಗೆ ಬಿದ್ದೆ. ಈ ಕಾಡಿನಲ್ಲಿ ಎಷ್ಟು ಅಪಾಯಗಳು! ಅವುಗಳ ವಿಷಯವೇನೂ ಗೊತ್ತಿಲ್ಲದವನಿಗೆ ಅಡಿಗಡಿಗೂ ಅಪಾಯವೇ! ಅಲ್ಲಿಯೇ ವಾಸವಾಗಿರುವವರು ಚಿಕ್ಕಂದಿನಿಂದಲೂ, ಅವುಗಳಿಂದ ಪಾರಾಗುವ ಉಪಾಯವನ್ನು ವಿಧಾನವನ್ನು ಕಲಿತುಕೊಂಡೇ ಬೆಳೆಯುತ್ತಾರೆ.

"ಬಹಳ ಹೊತ್ತಾಯಿತು. ನಾವಿನ್ನು ಹೋಗೋಣ. ನಿಮ್ಮವರೆಲ್ಲ ಹಸಿವಿನಿಂದ ಕಂಗಾಲಾಗಿದ್ದಾರು" ಎಂದ ಕುಮೇವಾವಾ.

ನಾವು ನದಿಯ ಇದಿರಾಗಿ ತೆಪ್ಪವನ್ನು ನಡೆಸುತ್ತ ಸಾಗಿದೆವು. ಹುಟ್ಟುಹಾಕುವುದು ಬಹಳ ಕಷ್ಟವಾಯಿತು. ಏಕೆಂದರೆ ನಾವು ಒಂದು ನಿಮಿಷ ಹುಟ್ಟುಹಾಕದಿದ್ದರೆ ಪ್ರವಾಹವು ನಮನ್ನು ಹತ್ತು ನಿಮಿಷ ಹಿಂದಕ್ಕೆ ಎಳೆದೊಯ್ಯುತಿತ್ತು.

ಬೇಗದಲ್ಲೇ ಝುರಿಯ ಸಮೀಪ ಬಂದೆವು. ನೀರಿನ ಹೋರು ಕೇಳಿಸಿತು. ಇಳಿಯುವಾಗ ಬಹಳ ಚಾಕಚಕ್ಯತೆಯಿಂದ ತೆಪ್ಪ ನಡೆಸಿದ ಆ ಹುಡುಗನು ಈಗೇನು ಮಾಡುವನೋ ಎಂದು ನಾನು ಯೋಚಿಸಿದೆ. "ನಾವಿಲ್ಲಿ ಇಳಿದು ದೋಣಿಯನ್ನು ಮೇಲಕ್ಕೆ ಎಳೆದುಕೊಂಡು ಹೋಗಬೇಕು." ಎಂದನವ.

ನಾವಲ್ಲಿ ಇಳಿದೆವು. ತೆಪ್ಪಕ್ಕೆ ಹಗ್ಗ ಕಟ್ಟಿ ಎಳೆಯತೊಡಗಿದೆವು. ಸ್ವಲ್ಪದೂರ ಬಂದಾಗ ದಂಡೆ ಇಕ್ಕಟ್ಟಾಗಿ ಅದೃಶ್ಯವಾಯಿತು. ಅಲ್ಲಿ ಕಾಡು ನೀರಿನಂಚಿನವರೆಗೂ ವಿಸ್ತರಿಸಿಕೊಂಡಿತ್ತು. ಹುಡುಗ ತೆಪ್ಪವನ್ನೆಳೆಯುತ್ತಾ ಮುಂದೆ ಹೋಗುತಿರುವಾಗ, ನಾನು ದೂಡುತ್ತಾ ಹಿಂದಿನಿಂದ ಹೋದೆ.

ಅವನು ತೆಪ್ಪವನ್ನು ಒಂದೇ ಕೈಯಿಂದ ಎಳೆಯುತ್ತ, ಇನ್ನೊಂದು ಕೈಯಲ್ಲಿದ್ದ ಕತ್ತಿಯಿಂದ ಅಡಿಗಡಿಗೂ ನೀರನ್ನು ತಿವಿಯುತ್ತಾ ಸಾಗುತಿದ್ದ. ಅವನು ಅಲ್ಲಿ ಏನಾದರೂ ಕೆಳೆದುಕೊಂಡಿದ್ದಾನೋ, ಅಲ್ಲ ಅದೊಂದು ಮೂಢ ವಿಶ್ವಾಸವೋ ನನಗೆ ತಿಳಿದಿಲ್ಲ. ಝುರಿಯ ಹೋರ್ದನಿ ಕಳೆದು ಹೋದ ಮೇಲೆ ಕೇಳೋಣವೆಂದುಕೊಂಡೆ. [ಇನ್ನೂ ಇದೆ]



# ಕಾಗೆ ತಂದ ಕಾಣಿಕೆ!





# ಚಡಾವುಗಳ ಪ್ರಭಾವ!

ಒಂದಾನೊಂದು ಕಾಲದಲ್ಲಿ ಕೈರೋ ನಗರದಲ್ಲಿ ಅಬೂ ಖಾಸೀಂ ಎಂಬ ಗಂಧಿಗನಿದ್ದನು. ಅವನು ವ್ಯಾಪಾರದಲ್ಲಿ ಯಥೇಚ್ಛವಾಗಿ ಲಾಭ ಬರುತ್ತಿದ್ದರೂ, ಹಣ ಖರ್ಚುಮಾಡಲು ಇಷ್ಟವಿಲ್ಲದೆ, ಭಿಕ್ಷುಕರೂ ಹೇಸುವಂತಹ ಬಟ್ಟೆಗಳನ್ನು ಧರಿಸುತ್ತಿದ್ದನು. ಅವನು ಧರಿಸುತ್ತಿದ್ದ ತಲೆರುಮಾಲು ಯಾವ ಕಾಲದ್ದೋ, ಏನೋ; ಅದರ ಬಣ್ಣವೇ ಬದಲಾಯಿಸಿತ್ತು. ಆದರೆ ಇವುಗಳೆಲ್ಲಕ್ಕಿಂತಲೂ ರೂಪಗೆಟ್ಟದ್ದು ಅವನ ಚಡಾವುಗಳು. ಅವು ಬಹಳ ಹಳೆ ತರಹದವು. ಎಷ್ಟು ಜನ ಚಮ್ಮಾರರು ಎಷ್ಟು ಸಾವಿರ ಮೊಳೆಗಳನ್ನು ಹೊಡೆದಿದ್ದರೋ, ಅವುಗಳಿಗೆ ಎಷ್ಟು ತೊಗಲಿನ ಚೂರುಗಳನ್ನು ತೇಪೆ ಹಾಕಿದ್ದರೋ ಹೇಳುವಂತಿಲ್ಲ. ವರ್ಷಾನುಗಟ್ಟಲೆ ದುರಸ್ತು ಪಡೆದು ಅದು ಭಾರವಾಗಿತ್ತು.

ಅಬೂ ಖಾಸಿಂನ ಚಡಾವುಗಳು ಜನಗಳಿಗೆ ಒಂದು ಗಾದೆಯಾದುವು. ಹೊರೆ ಹೊರುವವರು "ಅಬ್ಬಾ, ಈ ಮೂಟೆ ಅಬೂ ಖಾಸೀಮನ ಚಡಾವುಗಳಷ್ಟು ಭಾರವಾಗಿದೆ" ಎಂದು ಹೇಳುತ್ತಿದ್ದರು. ಯಾರಿಗಾದರೂ ಹೊಟ್ಟೆ ಶೂಲಿಯಾದರೆ "ನಾನು ತಿಂದ ತಿಂಡಿ ಅಬೂ ಖಾಸೀಮನ ಚಡಾವುಗಳಂತೆ ಕೆಲಸಮಾಡುತ್ತಿವೆ" ಎಂದು ಹೇಳುವುದುಂಟು.

ಒಮ್ಮೆ ಖಾಸೀಮನಿಗೆ ವ್ಯಾಪಾರದಲ್ಲಿ ಅಪಾರ ಲಾಭ ಬಂತು. ಇತರ ವರ್ತಕರಾಗಿದ್ದರೆ ತಮ್ಮ ಗೆಳೆಯರನ್ನು, ಜೊತೆ ವರ್ತಕರನ್ನು ಕರೆದು ಔತಣ ಕೊಡುತ್ತಿದ್ದರು. ಆದರೆ ಅಬೂ ಖಾಸೀಮನಿಗೆ ಅಂತಹ ಪದ್ಧತಿಗಳಿಲ್ಲ. ಲಾಭ ಬಂದಿದ್ದರಿಂದ ಹಬ್ಬದದಿನ ಎಲ್ಲರೂ ಸ್ನಾನಮಾಡುವಂತೆ ತಾನೂ ಸ್ನಾನಗೃಹಕ್ಕೆ ಹೋಗಿ ಮೈ ತೊಳೆದುಕೊಂಡು ಬರಲು ನಿರ್ಧರಿಸಿದನು. ಅವನು ಸ್ನಾನಮಾಡಿ ಅನೇಕ ತಿಂಗಳುಗಳಾಗಿದ್ದುವು. ಮೆಟ್ಟಕೊಂಡರೆ ಎಲ್ಲಿ ಸವೆದುಹೋಗುವುದೋ ಎಂದು ಚಡಾವುಗಳನ್ನು ಭುಜದಮೇಲೆ ಹಾಕಿಕೊಂಡು ಸ್ನಾನಶಾಲೆಗೆ ಹೋದನು. ಎಲ್ಲರೂ ಚಡಾವುಗಳನ್ನು

ಡಿ. ಬಿ. ರಾವ್

ಬಿಟ್ಟಂತೆ ಅವನೂ ಸಹ ತನ್ನ ಚಡಾವುಗಳನ್ನು ಸ್ನಾನಗೃಹದ ಹೊರಗೆ ಒಂದು ಬದಿಯಲ್ಲಿಟ್ಟು ಒಳಗೆ ಪ್ರವೇಶಿಸಿದನು.

ಅಬೂ ಖಾಸೀಮನ ಮೈತುಂಬಾ ಕೊಳೆ ಸೇರಿದ್ದುದರಿಂದ ಸ್ನಾನಗೃಹದ ಸೇವಕರು ಅನೇಕಬಾರಿ ಅವನ ಮೈ ತೊಳೆದು ಶುದ್ಧಿ ಗೊಳಿಸಬೇಕಾಯಿತು. ಅಬೂ ಖಾಸೀಮನ ಸ್ನಾನಮುಗಿಯುವ ವೇಳೆಗೆ ಸಂಜೆಯಾಗಿತ್ತು.

ಖಾಸೀಮನು ಹೊರಗೆ ಬಂದು ನೋಡಲು ತನ್ನ ಚಡಾವುಗಳಿದ್ದಲ್ಲಿ ಹಸುರುಬಣ್ಣದ ಹೊಸ ಚಡಾವುಗಳ ಜೊತೆಯೊಂದು ಕಾಣಿಸಿತು. "ಇಂತಹ ಚಡಾವುಗಳನ್ನು ಕೊಂಡುಕೊಳ್ಳ ಬೇಕೆಂದು ಅನೇಕ ವರ್ಷಗಳಿಂದ ಯೋಚಿಸು ತ್ತಿದ್ದೆ. ನನ್ನ ಮನಸ್ಸಿನಲ್ಲಿದ್ದ ಆಶೆಯನ್ನು ತಿಳಿದು ಕೊಂಡು ಅಲ್ಲಾ ನನಗೆ ಇವುಗಳನ್ನು ಬಹು ಮಾನವಾಗಿ ಕಳುಹಿಸಿಕೊಟ್ಟಿರಬೇಕು. ಅಥವಾ ಯಾರೋ ಮರೆವೆಯಿಂದ ನನ್ನ ಚಡಾವುಗಳನ್ನು ಹಾಕಿಕೊಂಡು ಹೊರಟು ಹೋಗಿರಬೇಕು" ಎಂದು ಅವನು ಹೊಸ ಚಡಾವುಗಳನ್ನು ಮೆಟ್ಟಿಕೊಂಡು ಆನಂದದಿಂದ ಮನೆಯ ದಾರಿಹಿಡಿದನು.

ಆ ಚಡಾವುಗಳು ಖಾಜಿಯವರ ಸೊತ್ತು. ಖಾಸೀಂ ಸ್ನಾನಗೃಹವನ್ನು ಬಿಟ್ಟು ತೆರಳಿದಾಗ ಆತನು ಇನ್ನೂ ಸ್ನಾನಗೃಹದಲ್ಲೇ ಇದ್ದನು. ಇಲ್ಲಿ ಚಡಾವುಗಳನ್ನು ನೋಡಿಕೊಳ್ಳುವ ನೌಕರನು ಉಳಿದ ಚಡಾವುಗಳ ನಡುವೆ ಖಾಸೀಮನ ಹಳೆಯ ಚಡಾವುಗಳನ್ನು ಕಂಡು ಅಸಹ್ಯ



ಪಟ್ಟು, ಅವುಗಳನ್ನು ಒಂದು ಮೂಲೆ ಯಲ್ಲಿಟ್ಟನು. ಅಬೂ ಖಾಸೀಮನು ಹೊರಗೆ ಬರುವಾಗ ಅವನು ತನ್ನ ಕೆಲಸ ಮುಗಿಸಿ ಕೊಂಡು ಮನೆಗೆ ಹೊರಟುಬಿಟ್ಟಿದ್ದನು.

ಖಾಜಿ ಸ್ನಾನ ಮುಗಿಸಿಕೊಂಡು ತನ್ನ ಚಡಾವುಗಳಿಗಾಗಿ ಅತ್ತಿತ್ತ ನೋಡಿದನು. ಸ್ನಾನಗೃಹದ ಸೇವಕರು ಅಲ್ಲೆಲ್ಲಾ ಹುಡುಕಿ ದಾಗ ಖಾಸೀಮನ ಚಡಾವುಗಳು ಸಿಕ್ಕಿದುವು. ಅವು ಹೆಸರುವಾಸಿಯಾದ ಚಡಾವುಗಳಾದು ದರಿಂದ, ಅವರು ಖಾಸೀಮನ ಮನೆಗೆ ಹೋಗಿ ಅವನನ್ನು ಹೊಸ ಚಪ್ಪಲಿಗಳಸಮೇತ ಖಾಜಿಯವರ ಮುಂದೆ ತಂದು ನಿಲ್ಲಿಸಿದರು. ಖಾಜಿ ತನ್ನ ಚಡಾವುಗಳನ್ನು ತೆಗೆದುಕೊಂಡು, ಖಾಸೀಮನನ್ನು ಸೆರೆಮನೆಗೆ ಕಳುಹಿಸಿದನು.

ಸೆರೆಮನೆಯ ಅಧಿಕಾರಿಗಳಿಗೆ ಲಂಚಕೊಟ್ಟು ಅಬೂ ಖಾಸೀಮನು ಹೊರಬಿದ್ದನು.

ಇಷ್ಟಾದನಂತರ ಅಬೂ ಖಾಸೀಮನಿಗೆ ತನ್ನ ಚಡಾವುಗಳಮೇಲೆ ಅಸಹ್ಯವುಂಟಾಯಿತು. ಅವನು ಅದನ್ನು ತೆಗೆದುಕೊಂಡು ಹೋಗಿ ನೈಲ್ ನದಿಯಲ್ಲಿ ಸೆದುಬಿಟ್ಟು, ಹಾಯಾಗಿ ಮನೆಗೆ ಬಂದನು.

ಆದರೆ ಆ ಚಡಾವುಗಳು ಅವನನ್ನು ಅಷ್ಟು ಸುಲಭವಾಗಿ ಬಿಡುವ ಘಟಗಳಲ್ಲ. ಕೆಲವು ದಿನಗಳನಂತರ ಕೆಲವು ಬೆಸ್ತರು ನದಿಯಲ್ಲಿ ಮೀನು ಹಿಡಿಯಲು ಬಲೆ ಬೀಸಿದರು. ಬಲೆ ಎಳೆಯುತ್ತಿರುವಾಗ ಅದು ಬಹಳ ಭಾರವಾಗಿ ತೋರಿತು. ತೀರಾ ಎಳೆದುನೋಡಲು ಅದರಲ್ಲಿ ಅಬೂ ಖಾಸೀಮನ ಚಡಾವುಗಳಿದ್ದುವು. ಆ ಚಡಾವುಗಳಿಗೆ ಹೊಡೆದಿದ್ದ ಮೊಳೆಗಳ ದೆಶೆಯಿಂದ ಬಲೆ ಅಲ್ಲಲ್ಲಿ ಕಿತ್ತುಹೋಯಿತು. ಅವರು ನಿರಾಶೆ ಮತ್ತು ಕೋಪದಿಂದ ಚಡಾವುಗಳನ್ನು ಅಬೂ ಖಾಸೀಮನ ಅಂಗಡಿಗೆ ತಂದು, ರಿವ್ವನೆ ಅವುಗಳನ್ನು ಅಂಗಡಿಯೊಳಕ್ಕೆ ಎಸೆದರು. ಅವು ಅಬೂ ಖಾಸೀಮನ ಔಷಧ ಮತ್ತು ಅತ್ತರಿನ ಸೀಸೆಗಳಿಗೆ ತಗುಲಿ, ಸೀಸೆಗಳು ಒಡೆದುವು. ಅದರಿಂದ ಖಾಸೀಮನಿಗೆ ತುಂಬಾ ನಷ್ಟವಾಯಿತು.

ಖಾಸೀಮನು ಚಡಾವುಗಳನ್ನು ಬಾಯಿಗೆ ಬಂದಂತೆ ಬಯ್ದು, ಅವುಗಳನ್ನು ಹಿತ್ತಲಿಗೆ ತೆಗೆದುಕೊಂಡು ಹೋಗಿ, ಒಂದು ಮೂಲೆಯಲ್ಲಿ ಹೂತಿಡಲು, ಹಳ್ಳ ತೋಡಲಾರಂಭಿಸಿದನು. ಅಬು ಖಾಸೀಮನಮೇಲೆ ಬಹಳ ದಿನಗಳಿಂದ



ಸೇಡು ತೀರಿಸಿಕೊಳ್ಳಲು ಹವಣಿಸುತ್ತಿದ್ದ ನೆರೆಮನೆಯಾತನಿಗೆ ಈ ವಿಷಯ ತಿಳಿಯಿತು. ಅವನು ನೆಟ್ಟಗೆ ನಗರಾಧಿಕಾರಿಯಬಳಿಗೆ ಹೋಗಿ "ಅಬೂ ಖಾಸೀಂ ತನ್ನ ಹಿತ್ತಲಲ್ಲಿ ಯಾವುದೋ ನಿಧಿ ಅಗೆದು ತೆಗೆದುಕೊಳ್ಳುತ್ತಿದ್ದಾನೆ" ಎಂದು ದೂರುಕೊಟ್ಟನು.

ಅಬೂ ಖಾಸೀಮನು ತುಂಬಾ ಪಿಸುಣನೆಂಬ ವಿಷಯ ಎಲ್ಲರೂ ಅರಿತಿದ್ದರಾದುದರಿಂದ ಅಧಿಕಾರಿಯು ಫಿರ್ಯಾದಿಯ ಮಾತನ್ನು ನಂಬಿದನು. ಕೂಡಲೇ ಖಾಸೀಮನಿಗೆ ಕರೆ ಬಂತು. "ನಾನು ನನ್ನ ಚಡಾವುಗಳನ್ನು ಹೂತಿಡಲು ಹಳ್ಳ ತೋಡಿದುದುಂಟು. ನಿಧಿಯ ವಿಷಯ ಸುಳ್ಳು" ಎಂದು ಖಾಸೀಮನು ಪ್ರಮಾಣಮಾಡಿ ಹೇಳಿದನು. ಆದರೂ ಅಧಿಕಾರಿ ಅವನಿಂದ ಭಾರಿ ಲಂಚಪಡೆದುಕೊಂಡೇ ಮನೆಗೆ ಹೋಗಲುಬಿಟ್ಟನು.

ಅಬೂ ಖಾಸೀಮನು ದುಃಖಾವೇಶದಿಂದ ತನ್ನ ಗಡ್ಡ ಕಿತ್ತುಕೊಂಡನು. ಅವನು ಚಡಾವುಗಳನ್ನು ತೆಗೆದುಕೊಂಡು ನಗರದಾಚೆ ಬಹಳ ದೂರದಲ್ಲಿದ್ದ ಒಂದು ಕಾಲುವೆಯಲ್ಲೆಸೆದು, ಇನ್ನು ಅವುಗಳ ಕಾಟ ತಪ್ಪಿತೆಂದು ಭಾವಿಸಿ ಮನೆಗೆ ಬಂದನು. ಆದರೆ ಆ ಕಾಲುವೆಯ ಒಂದು ಕೊನೆಯಲ್ಲಿ ಒಂದು ಯಂತ್ರಾಗಾರವಿತ್ತು. ಖಾಸೀಮನ ಚಡಾವುಗಳು ಕೊಚ್ಚಿಕೊಂಡು ಹೋಗಿ ಆ ಯಂತ್ರದ ನಡುವೆ ಸಿಕ್ಕಿಕೊಂಡಿತು. ಇದರಿಂದಾಗಿ ಕಾರ್ಖಾನೆಯ ಕೆಲಸ ನಿಂತುಹೋಯಿತು. ಯಂತ್ರಗಳನ್ನು ಬಿಚ್ಚಿ ದುರಸ್ತಿ ಮಾಡುವಾಗ ಚಡಾವುಗಳು



ಹೊರಗೆ ಬಂದುವು. ಕಾರ್ಖಾನೆಯ ಯಜಮಾನನಿಗೆ ಚಡಾವುಗಳ ಗುರುತು ಸಿಕ್ಕಿತು. ಅವನು ಖಾಸೀಮನಮೇಲೆ ನಷ್ಟಪರಿಹಾರಕ್ಕೆ ದಾವಾ ಹಾಕಿದನು. ಅಬೂ ಖಾಸೀಮನು ಬಹಳ ಹಣ ವೆಚ್ಚಮಾಡಬೇಕಾಯಿತು.

ಅವನಿಗೆ ಮತಿ ಹೋದಂತಾಯಿತು. ತನ್ನ ಮನೆಯ ಮಾಡಿನಮೇಲಿದ್ದ ಮೋಟು ಗೋಡೆಯಮೇಲೆ ಚಡಾವುಗಳನ್ನಿಟ್ಟು, ಗೋಡೆಗೆ ಆತುಕೊಂಡು, ಚಡಾವುಗಳ ಕಾಟದಿಂದ ಹೇಗೆ ಬಿಡಿಸಿಕೊಳ್ಳಲಿ ಎಂದು ಯೋಚಿಸುತ್ತ ನಿಂತಿದ್ದನು. ಇಷ್ಟರಲ್ಲಿ ನೆರೆಮನೆಯ ಉಪ್ಪರಿಗೆಯ ಮೇಲಿಂದ ಒಂದು ನಾಯಿ ಖಾಸೀಮನ ಚಡಾವುಗಳನ್ನು ಕಂಡು, ಎರಡು ಮನೆಗಳ ನಡುವೆಯಿದ್ದ ಅಡ್ಡ ಗೋಡೆಯ ಮೇಲಿಂದ ಹಾರಿ ಚಡಾವುಗಳನ್ನು ಕಿತ್ತು ತಿನ್ನಲು ಪ್ರಯತ್ನಿಸಿತು. ಆಗ ಅಡ್ಡಗೋಡೆ ತುಸಕ್ಕನೆ ಕುಸಿದು ಕೆಲವಾರು ಇಟ್ಟಿಗೆಗಳೊಂದಿಗೆ, ಖಾಸೀಮನ ಆಚಡಾವುಗಳು ಬೀದಿಯಲ್ಲಿ ಹೋಗುತ್ತಿದ್ದ ಮುದುಕಿಯಮೇಲೆ ಬೀಳಲು, ಅವಳು ಕೂಡಲೇ ಸತ್ತುಹೋದಳು. ಬೀದಿಯಲ್ಲಿ ಜನ ನೆರೆಯಿತು. ರಾಜಭಟರು ಬಂದು ಖಾಸೀಮನನ್ನು ಹಿಡಿದುಕೊಂಡು ಹೋಗಿ ಸೆರೆಮನೆಯಲ್ಲಿಟ್ಟರು. ಮರಣ ಹೊಂದಿದ ವ್ಯಕ್ತಿಯ ನೆಂಟರಿಗೆ ಪರಿಹಾರ ದ್ರವ್ಯವನ್ನೂ ಅಧಿಕಾರಿಗೆಲಂಚವನ್ನೂ ಕೊಟ್ಟು, ಸೆರೆಮನೆಯಿಂದ ಹೊರಬಿದ್ದ ಖಾಸೀಂ.

ಮಾರನೇಯದಿನ ಅವನು ತನ್ನ ಚಡಾವುಗಳೊಂದಿಗೆ ಖಾಜಿಯಬಳಿಗೆ ಹೋಗಿ "ಮಹಾಪ್ರಭು, ಈ ದರಿದ್ರ ಚಡಾವುಗಳು ನನ್ನ ಮನೆಯನ್ನು ಹಾಳು ಮಾಡಿದುವು. ಇಂದಿನಿಂದ ನನಗೆ ಚಡಾವುಗಳೇ ಇಲ್ಲ. ಯಾವ ಚಡಾವುಗಳಿಂದಾಗಲೀ ಯಾರಿಗಾಗಲಿ ನಷ್ಟವಾದರೆ ನಾನು ಜವಾಬ್ದಾರನಲ್ಲ. ಈ ವಿಷಯವನ್ನು ನೀವು ಕಾನೂನು ರೀತ್ಯಾ ಎಲ್ಲರಿಗೂ ತಿಳಿಸಬೇಕು" ಎಂದು ಕಾತುರ ಸ್ವರದಿಂದ ಹೇಳಿದನು. ಅವನ ಮಾತು ಕೇಳಿ ನ್ಯಾಯಾಸ್ಥಾನದಲ್ಲಿದ್ದ ಜನರೊಂದಿಗೆ ಖಾಜಿಯೂ ಸಹ ಗಹಗಹಿಸಿ ನಕ್ಕನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. 10

1959 ಜನವರಿ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ:





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ನವಂಬರ್ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: **ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು-26.**

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ಮೇಲೇರಿದರೆ ಸಾಧ್ಯವೆ?

ಎರಡನೇ ಫೋಟೋ: ಮೇಲೆ ಹಾರಿಸಲು ಕೂಡದೆ?

ಕಳಿಸಿದವರು: ಮಂಜುನಾಥಭಟ್ಟ,

S/o. ಎಂ. ವಿಟ್ಠಲಭಟ್ಟ, ರಿಟಯರ್ಡ್ ಅಮಿಾನ್, ಬಂಗ್ರ, ಮಂಜೇಶ್ವರ

**ಬಹುಮಾನ ರೂ. 10/-ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.**

# ಚಿತ್ರ ಕಥೆ





ವಾಸು ಮತ್ತು ಗೋಪಿಯರು 'ಟೈಗರ್' ನೊಂದಿಗೆ ತೋಟದಲ್ಲಿ ತಿರುಗಾಡು ತ್ತಿದ್ದರು. ಇದ್ದಕ್ಕಿದ್ದ ಹಾಗೆ ಒಂದು ಮರದ ಕೊಂಬೆಯಮೇಲಿನಿಂದ ಒಂದು ದೊಡ್ಡ ಬೆಕ್ಕು ಅವರಮೇಲೆ ಧುಮುಕಿತು. ಧುಮುಕೀ ಧುಮುಕುವಷ್ಟರಲ್ಲಿ 'ಟೈಗರ್' ಗಬಕ್ಕನೆ ಹಾರಿ ಅದರ ಕುತ್ತಿಗೆ ಹಿಡಿಯಿತು. ಢಬಾರ್ ಎಂದು ಒಡೆದೇಹೋಯಿತು ಆ ಬೆಕ್ಕು! ಅದೊಂದು ಬೆಲೂನು ಬೆಕ್ಕು. ಅದನ್ನು ಮರದ ಕೊಂಬೆಯ ಮೂಲಕ ದಾರಕಟ್ಟಿ ಅವರಮೇಲೆ ಬಿಟ್ಟಿದ್ದನು ಆ ಪೋಕರಿ ಹುಡುಗ. ಈಗ ಬೆಕ್ಕು ಒಡೆದು ಹೋಯಿತಲ್ಲಾ ಎಂದು, ಅಳುತ್ತಾ ನಾಚಿಗೆಯಿಂದ ಓಡಿಯೇ ಹೋದನಾತ!





**Printed by B. NAGI REDDI at the B. N. K. Press Private Ltd., and Published by him for Chandamama Publications, from Madras 26.—Controlling Editor: SRI 'CHAKRAPANI'**

## ನಿಮ್ಮ ಬಟ್ಟೆಗಳಿಗೆ ಅತ್ಯುತ್ತಮ ಸಾಬೂನೇ ಬೇಕು—
## ಅದೆಂದರೆ ತಾತಾರವರ 501 ಸ್ಪೆಷಲ್ ಸಾಬೂನು

ತಾತಾರವರ 501 ಸ್ಪೆಷಲ್ ಸಾಬೂನನ್ನು ಉಪಯೋಗಿಸಿ ನಿಮ್ಮ ಬಟ್ಟೆಗಳಿಗೆ ವಿಶೇಷ ರಕ್ಷಣೆಯನ್ನು ಕೊಡಿರಿ! ಬಟ್ಟೆಗಳನ್ನು ಶುಭ್ರವಾಗಿ, ಹೊಳೆಯುವಂತೆ ಮಾಡುವ ಈ ಸಾಬೂನಿನಿಂದ ಎಂತಹ ನಾಜೂಕು ಬಟ್ಟೆಗಳನ್ನಾದರೂ ಒಗೆಯಬಹುದು. ಯಾವಾಗಲೂ ತಾತಾರವರ 501 ಸ್ಪೆಷಲ್ ಸಾಬೂನನ್ನು ಉಪಯೋಗಿಸಿರಿ!




ಹೊಸ ಹಳದಿ ಮತ್ತು ಕೆಂಪು ಬಣ್ಣದ ಹೊದಿಕೆ ಇರುವುದನ್ನು ನೋಡಿ ಕೊಂಡುಕೊಳ್ಳಿರಿ

ತಾತಾ ಆಯಿಲ್ ಮಿಲ್ಸ್ ಕಂಪೆನಿ ಲಿಮಿಟೆಡ್

**ದಿ ತಾತಾ ಆಯಿಲ್ ಮಿಲ್ಸ್ ಕಂಪೆನಿ, ಲಿಮಿಟೆಡ್**

ಸೇಲ್ಸ್ ಆಫೀಸ್: 2, ಮಹಾತ್ಮಾ ಗಾಂಧೀ ರೋಡ್, ಬೆಂಗಳೂರು-1.

Photo by M. V. Vijayakar



ಬಹುಮಾನ ಪಡೆದ ಶೀರ್ಷಿಕೆ

ಮೇಲೆ ಹಾರಿಸಲು ಕೂಡದೆ?

ಕಳುಹಿಸಿದವರು: ಮಂಜುನಾಥಭಟ್ಟ

